ಶ್ರೀ

# ವಿಕಾರ-ವಿನಾಶ!

ಇದನ್ನು

ಎಸ್, ಎ, ಕುಲಕರಣಿ. ಅ. ಮಾಸ್ತರ ಗಜೇಂದ್ರಗಡ

ಇವರು ಬರೆದರು.

( ಎರಡನೆಯ ಆವೃತ್ತಿ ೧೦೦೦ ಪ್ರತಿಗಳು. )



ಇದು ಶ್ರೀ. ವೇಂಕಟೇಶ ಪ್ರೇಸಿನಲ್ಲಿ ವೇಂಕಟೇಶ ತಿರಕೋ ಕುಲಕರ್ಣಿ ಇವರಿಂದ ಛಾಪಿಸಲ್ಪಟ್ಟು ಅವರ "ಸದ್ಗುರು" ಆಫೀಸಿನಲ್ಲಿ ಅವರಿಂದ ಪ್ರಸಿದ್ಧಮಾಡಲ್ಪಟ್ಟಿತು.

ಬೆಲೆ ೧೦ ಆಣೆ.

# ಪ್ರಸ್ತಾವನೆ.

ನಮ್ಮ ಸದ್ಗುರು ಮಾಸಪತ್ರಿಕೆಯಲ್ಲಿ ಭಾಗಶಃ ಪ್ರಸಿದ್ಧವಾಗಿದ್ದ ಈ ಚಿಕ್ಕಕಾದಂಬರಿಯು ಕನ್ನಡಿಗರ ಆದರಕ್ಕೆ ಪಾತ್ರವಾದರೂ, ಇದರ ಎರಡನೆಯ ಆವೃತ್ತಿ ಹೊರಡಿಸುವ ಪ್ರಸಂಗವು ಈವರೆಗೆ ಬರಲಿಲ್ಲವು; ಆದರೆ ಈಗ ನಮ್ಮ ಸ್ವಂತದ ಮುದ್ರಣಾಲಯವು ಕಾರ್ಯಮಾಡುತ್ತಿರುವದರಿಂದ, ಇದರ ಹೊಸ ಆವೃತ್ತಿಹೊರಡಿಸುವ ಪ್ರಸಂಗ ಒದಗಿದ್ದಕ್ಕಾಗಿ ನಮಗೆ ಸಂತೋಷವಾಗುತ್ತದೆ. ಈ ಪ್ರಸಂಗದಲ್ಲಿ ಈ ಕಾದಂಬರಿಯ ಲೇಖಕರಾದ ನಮ್ಮ ಮಿತ್ರ ಎಸ್, ಎ, ಕುಲಕರಣಿ ಇವರು, ನಮ್ಮ ಸದ್ಗುರು ಸಂಸ್ಥೆಗೆ ಇದರ ಹಕ್ಕು ಮೊದಲನೆಯ ಸಾರೆಯೇ ಬಿಟ್ಟುಕೊಟ್ಟಿರುವದಕ್ಕಾಗಿ, ನಾವು ಕೃತಜ್ಞತೆಯನ್ನು ಪುನಃ ವ್ಯಕ್ತಪಡಿಸುವೆವು.

ವೇ. ತೀ. ಗಳಗನಾಥ.

# ವಿಕಾರ ವಿನಾಶ!

## ಮೊದಲನೆಯ ಪರಿಚ್ಛೇದ.

ಇಳಿಹೊತ್ತಿನ ಸಮಯವು. ಪಶ್ಚಿಮದಿಕ್ಕಿನಲ್ಲಿ ಸೂರ್ಯನು ಕ್ರಮವಾಗಿ ಕೆಳಗಿಳಿಯುತ್ತಲಿದ್ದಾನೆ. ಅವನ ಪ್ರಖರವಾದ ಕಿರಣಗಳು ಬರಬರುತ್ತ ಶಾಂತವಾಗತೊಡಗಿವೆ. ಸೌಮ್ಯವಾದ ಕಿರಣಗಳು ಎಲ್ಲಕಡೆಯಲ್ಲಿ ಪಸರಿಸಿವೆ. ಈ ಪ್ರಶಾಂತ ಕಿರಣಗಳಿಂದ ಆಗ್ರಾನಗರದ ಪೇಟೆಯ ನೋಟವು ಅತ್ಯಂತ ಪ್ರೇಕ್ಷಣೀಯವಾಗಿದೆ.

ಹಿಂದುಸ್ತಾನದಲ್ಲಿ ಮೊಗಲರ ರಾಜ್ಯವನ್ನು ಸ್ಥಾಪಿಸಿದವನು ಬಾಬರನು. ಇವನು ವಿಲಾಸಕ್ಕೆ ಮೆಚ್ಚಿದವನಾಗಿರಲಿಲ್ಲ. ಇವನ ಮಗನಾದ ಹುಮಾಯುನನು ವಿಲಾಸಪ್ರಿಯನಾಗಿದ್ದರೂ, ಅನುಕೂಲಸಮಯವನ್ನು ಹೊಂದಲಿಲ್ಲ. ತರುವಾಯ ಬಂದ ಅಕಬರನು ತನ್ನ ಕೌಶಲ್ಯದಿಂದಲೂ ಪರಾಕ್ರಮದಿಂದಲೂ ಮೊಗಲರ ರಾಜ್ಯವನ್ನು ಸ್ಥಿರಪಡಿಸಿ, ವಿಲಾಸೋಪಭೋಗಕ್ಕೆ ಉತ್ತಮವಾದ ಅನುಕೂಲತೆಯನ್ನು ದೊರಕಿಸಿದನು. ದಿಲ್ಲಿಯು ಮೊಗಲರ ರಾಜಧಾನಿಯಾಗಿದ್ದರೂ, ಈ ನಗರವು ಅಕಬರನಿಗೆ ಅಷ್ಟೊಂದು ಪ್ರಿಯಕರವಾಗಿದ್ದಂತೆ ತೋರುವದಿಲ್ಲ. ಇವನು ಆಗ್ರಾಪಟ್ಟಣದಲ್ಲಿಯೇ ಬಹುಕಾಲ ಇರುತ್ತಿದ್ದನು. ಇದರಿಂದ ಅಕಬರನ ಆಳಿಕೆಯಲ್ಲಿ ಆಗ್ರಾನಗರವೇ ಮೊಗಲರ ರಾಜಧಾನಿಯಾಗಿತ್ತೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಶಹಾಜಹಾನನು ತಾಜಮಹಾಲಿನಂತಹ ಅದ್ವಿತೀಯ ಕಟ್ಟಡಗಳನ್ನು ಕಟ್ಟಿಸಿ, ಆಗ್ರಾನಗರದ ಶೋಭೆಯನ್ನು ಬಹಳವಾಗಿ ಹೆಚ್ಚಿಸಿದನೆಂಬುದು ನಿಜವು; ಆದರೆ ಇವನಿಗಿಂತ ಮೊದಲು ಅಂದರೆ ಅಕಬರನ ಆಳಿಕೆಯಲ್ಲಿ ಈ

ಪಟ್ಟಣವು ಪ್ರೇಕ್ಷಣೀಯವಾಗಿದ್ದಿಲ್ಲವೆಂದು ಹೇಳಲಿಕ್ಕಾಗದು. ಅಕಬರನು ಈ ನಗರದಲ್ಲಿ ಅನೇಕ ಹೊಸಕಟ್ಟಡಗಳನ್ನು ಕಟ್ಟಿಸಿ, ಇದರ ಸೌಂದರ್ಯ ವನ್ನು ಹೆಚ್ಚಿಸಿದ್ದನು. ಇವನ ಆಳಿಕೆಯಲ್ಲಿ ಶ್ರೀಮಂತರಾದ ಅನೇಕ ಅಮೀರ-ಉಮರಾವರು ಪ್ರಾಸಾದೋಪಮವಾದ ಮಂದಿರಗಳನ್ನು ಕಟ್ಟಿಸಿ ವಾಸಿಸಹತ್ತಿ, ಈ ನಗರದ ಗೌರವವನ್ನು ಬೆಳಿಸಿದರು. ವಿದೇಶೀಯ ಯುವ ನರು ಭಾಗ್ಯಪರೀಕ್ಷಾರ್ಥವಾಗಿ ಬಂದು, ಇಲ್ಲಿ ಇರಹತ್ತಿದರು.

ಇಂದ್ರನ ಅಮರಾವತಿಯಂತೊಪ್ಪುವ ಈ ಆಗ್ರಾನಗರದ ಸುಂದರ ವಾದ ಪೇಟೆಯು ಬಗೆಬಗೆಯ ದೇಶೀಯ, ವಿದೇಶೀಯ ವಸ್ತುಗಳಿಂದ ಶೋಭಾಯಮಾನವಾಗಿತ್ತು. ಒಂದೆಡೆಯಲ್ಲಿ ಚಿನಿವಾರರ ಅಂಗಡಿಯ ಸಾಲು, ಮುತ್ತು-ರತ್ನ-ಬೆಳ್ಳಿ-ಬಂಗಾರಗಳ ತರತರದ ಆಭರಣಗಳಿಂದ ಒಪ್ಪುತ್ತಲಿತ್ತು. ಬೇರೊಂದು ಕಡೆಯಲ್ಲಿ ರೇಷ್ಮೆ-ಉಣ್ಣೆ-ನೂಲುಗಳ ವಸ್ತ್ರಗಳಿಂದೊಡಗೂಡಿದ ಅನೇಕ ಅಂಗಡಿಗಳು. ಮತ್ತೊಂದೆಡೆಯಲ್ಲಿ ತಾಂಬ್ರ-ಹಿತ್ತಾಳಿ-ಬೆಳ್ಳಿ-ಬಂಗಾರಗಳ ತರತರದ ಪಾತ್ರೆಗಳಿಂದೊಡಗೂ ಡಿದ ಅಂಗಡಿಯಸಾಲು. ಇನ್ನೊಂದು ಕಡೆಯಲ್ಲಿ ಕೈಗಾರಿಕೆಯ ಉತ್ತ ಮೋತ್ತಮ ವಸ್ತುಗಳಿಂದಲಂಕೃತವಾದ ಅಂಗಡಿಗಳು. ಎತ್ತನೋಡಿದತ್ತ ನಯನಮನೋಹರವಾದ ನೋಟವು. ಈ ದೃಶ್ಯವು ಅಪರಿಚಿತರನ್ನು ಬೆರ ಗುಗೊಳಿಸದಿರುತ್ತಿದ್ದಿಲ್ಲ.

ಅಸಂಖ್ಯಾಕರಾದ ಗಿರಾಕಿಗಳು ತಮಗೆ ಬೇಕಾಗಿದ್ದ ಒಡವೆಗಳನ್ನು ತೆಗೆದುಕೊಳ್ಳುವದಕ್ಕೆಂದು ಪೇಟೆಯಲ್ಲಿ ನೆರೆದಿದ್ದರು. ತರುಣ ಸೈನಿಕನೊ ಬ್ಬನು ಉತ್ತಮವಾದ ಕುದುರೆಯನ್ನೇರಿ ಈ ಜನಸಂದಣಿಯಲ್ಲಿ ಮಾರ್ಗ ಕ್ರಮಿಸುತ್ತಲಿದ್ದನು. ಇವನು ಬೆಲೆಯುಳ್ಳ ವಸ್ತ್ರಗಳನ್ನು ಧರಿಸಿದ್ದನು. ಇವನ ಟೊಂಕದಲ್ಲೊಂದು ಖಡ್ಗವು ಅಲೆದಾಡುತ್ತಲಿತ್ತು. ಕೆಲವರು ಇವ ನಿಗೆ ಸಲಾಂ ಮಾಡುತಲಿದ್ದರು. ಬೇರೆ ಕೆಲವರು ಇವನಕಡೆಗೆ ಕುತೂಹ ಲದಿಂದ ನೋಡುತ್ತಿದ್ದರು. ಪ್ರಸನ್ನಚಿತ್ತನಾಗಿದ್ದ ಸೈನಿಕನು ಈ ಜನರ ಕಡೆಗೆ ದೃಷ್ಟಿಯಿರಿಸದೆ, ಮುಂದೆ ನಡೆದಿದ್ದನು. ತುಸು ಹೊತ್ತಿನಲ್ಲಿ ಇವನು

ಪೇಟೆಯನ್ನು ದಾಟಿಬಂದನು. ಒಂದು ಮೂಲೆಯಲ್ಲಿ ಮುದುಕೆಯೊಬ್ಬಳು ಕೆಲವು ಚಿತ್ರಗಳನ್ನಿಟ್ಟುಕೊಂಡು ಕುಳಿತಿದ್ದಳು. ಸೈನಿಕನು ಅವಳ ಬಳಿಗೆ ಬಂದು ಕುದುರೆಯನ್ನು ನಿಲ್ಲಿಸಿದನು. ಮುದುಕೆಯು ಎದ್ದುನಿಂತು ಸಲಾಂ ಮಾಡಿದಳು. ಕೈಯಲ್ಲಿ ಮೂರು-ನಾಲ್ಕು ಚಿತ್ರಗಳನ್ನು ಹಿಡಿದುಕೊಂಡು ತುಸು ಮುಂದೆ ಬಂದಳು. ಸೈನಿಕನು ಇವಳನ್ನು ಕುರಿತು—"ಅಮ್ಮಾ, ಈ ಚಿತ್ರಗಳನ್ನು ಮಾರಿಸುವೆಯೇನು?" ಎಂದು ಕೇಳಿದನು.

ಮುದುಕೆಯು ಮುಗುಳುನಗೆನಕ್ಕು—"ಸರದಾರಸಾಹೇಬ, ಮಾರದೇನು ಮಾಡಲಿ? ಮಾರಾಟಮಾಡುವದಕ್ಕಾಗಿಯೇ ನಾನಿಲ್ಲಿ ಕುಳಿತಿದ್ದೇನೆ," ಎಂದು ಹೇಳಿದಳು.

ಹಾಗಾದರೆ, ನಿನ್ನಲ್ಲಿರುವ ಒಂದೆರಡು ಚಲೋ ಚಿತ್ರಗಳನ್ನು ತೋರಿಸು, ಎಂದು ಸೈನಿಕನು ಅಂದನು.

ಮುದುಕೆಯು ಕೈಯಲ್ಲಿರುವ ಚಿತ್ರಗಳಲ್ಲೊಂದನ್ನು ಸೈನಿಕನ ಮುಂದೆ ಹಿಡಿದಳು. ತರುಣನು ಆ ಚಿತ್ರವನ್ನು ತಕ್ಕೊಂಡು, ಕೆಲಹೊತ್ತು ನೋಡಿದನು. ಇದು ಒಬ್ಬ ಸುಂದರಿಯ ಚಿತ್ರವಾಗಿತ್ತು. ಚಿತ್ರಗತರಮಣಿಯ ರೂಪಾವಲೋಕನದಿಂದ ಸಂತುಷ್ಟನಾದಸೈನಿಕನು-"ಅಮ್ಮಾ, ಈ ಚಿತ್ರವು ಯಾರದು?" ಎಂದು ಕೇಳಿದನು.

ಚದುರೆಯಾದ ಆ ಚಿತ್ರಕಾರಳು ತರುಣನ ಈ ಭಾವವನ್ನು ತಿಳಿದಳು. ಅವಳು ನಗೆಮೋರೆಯಿಂದ—"ಜನಾಬ, ಅದು ಅಜಮೀರದ ಪ್ರಖ್ಯಾತ ಅಮೀರರಾದ ಸೋಹನ ಉಲ್ಲಾಸಾಹೇಬರ ಮಗಳಚಿತ್ರವು. ಇಗೋ, ಈ ಚಿತ್ರವನ್ನು ನೋಡಿರಿ," ಎಂದು ಹೇಳಿ ಬೇರೊಂದು ಚಿತ್ರವನ್ನು ಕೊಟ್ಟಳು. ಸೈನಿಕನು ಅದನ್ನು ತಕ್ಕೊಂಡು ನೋಡಿ,—"ಇದಾರಚಿತ್ರವು?" ಎಂದು ಕೇಳಿದನು.

"ಈ ಪಟ್ಟಣದ ಪ್ರಸಿದ್ಧ ವೇಶ್ಯೆಯಾದ ಜಿನ್ನತ-ಉನ್ನೀಸಳದು," ಎಂದು ಮುದುಕೆಯು ಹೇಳಿದಳು. ಸೈನಿಕನು ಈ ವಾರವನಿತೆಯನ್ನು ಪ್ರತ್ಯಕ್ಷವಾಗಿ ನೋಡಿರದಿದ್ದರೂ, ಜನರಿಂದ ಇವಳ ಚರಿತ್ರೆಯನ್ನು ಕೇಳಿ

ದವನಾಗಿದ್ದನು. ಇವಳು ಶ್ರೇಷ್ಠಸುಂದರಿಯೂ, ಪ್ರಸಿದ್ಧ ಗಾಯಿಕೆಯೂ ಆಗಿರುವದು ಅವನಿಗೆ ಗೊತ್ತಿತ್ತು. ಲಕ್ಷ್ಮೀಪುತ್ರರೂ ಉಚ್ಛೃಂಖಲವೃತ್ತಿಯವರೂ ಆದ ಅನೇಕ ಅಮೀರ-ಉಮರಾವರನ್ನು, ತನ್ನ ಮೋಹಜಾಲದಲ್ಲಿ ಕೆಡವಿದ್ದ ಈ ಗಣಿಕೆಯ ಚಿತ್ರವನ್ನು ನೋಡಿ, ತರುಣನಿಗೆ ಆನಂದವಾಗದಿರಲಿಲ್ಲ. ಅವನು ಪ್ರಸನ್ನಮುಖದಿಂದ— "ಅಮ್ಮಾ, ಇವೆರಡೂ ಚಿತ್ರಗಳ ಬೆಲೆಯೇನು?" ಎಂದು ಕೇಳಿದನು.

ಮುದುಕೆಯು ಸಲಾಂಮಾಡಿ,— "ಸರದಾರಸಾಹೇಬ, ನಾನು ಬಡವಿಯು. ತಮ್ಮಂಥವರ ಅನುಗ್ರಹದಿಂದಲೇ ಜೀವಿಸುತ್ತಿರುವೆನು. ನಾನು ನಿಮಗೆ ಇವುಗಳ ಬೆಲೆಯನ್ನು ಹೇಳಬೇಕೆಂಬಹಾಗೇನೂ ಇಲ್ಲ. ಒಂದೊಂದಕ್ಕೆ ಒಂದೊಂದು ಅಸರಫಿ ( ಆ ಕಾಲದ ಬಂಗಾರದ ನಾಣ್ಯ ) ಯನ್ನು ಕೊಟ್ಟುಬಿಡಿರಿ," ಎಂದು ಹೇಳಿದಳು.

ಸೈನಿಕನು ಮುದುಕೆಯು ತೋರಿಸಿದ ಸನ್ಮಾನರಕ್ಷಣೆಗಾಗಿ, ಎರಡು ಅಸರಫಿಗಳನ್ನು ಕೊಟ್ಟುಬಿಟ್ಟನು. ಚಿತ್ರಕಾರಳು ಅವುಗಳನ್ನು ತಕ್ಕೊಂಡು ಸಂತುಷ್ಟಚಿತ್ತಳಾಗಿ, ಮತ್ತೊಂದು ಚಿತ್ರವನ್ನು ತರುಣನ ಎದುರಿಗೆ ಹಿಡಿದು— "ಸಾಹೇಬ, ಈ ಚಿತ್ರವನ್ನಷ್ಟು ನೋಡಿರಿ," ಎಂದು ಹೇಳಿದಳು. ಸೈನಿಕನು ಆ ಚಿತ್ರವನ್ನು ತಕ್ಕೊಂಡು ನೋಡಿದನು. ಚಿತ್ರಾಂಕಿತ ಮೂರ್ತಿಯು ಅವನ ಹೃದಯವನ್ನಾಕರ್ಷಿಸಿಬಿಟ್ಟಿತು. ಅವನು ಮುಗ್ಧನಾಗಿ ಹೋದನು.

ತರುಣನು ಈಮೊದಲು ಎರಡು ಚಿತ್ರಗಳನ್ನು ನೋಡಿದ್ದನು. ಆ ಎರಡು ಚಿತ್ರಗಳಿಗಿಂತ ಈ ಚಿತ್ರವು ಅತ್ಯಂತ ಮನೋಹರವಾಗಿತ್ತು. ಸೈನಿಕನು ಬಹಳಹೊತ್ತಿನವರೆಗೆ ಈ ಚಿತ್ರವನ್ನು ನೋಡಿದನು. ಮನಸ್ಸು ದಣಿಯಲಿಲ್ಲ. ನೋಡಿನೋಡಿದಂತೆ ಚಿತ್ರಿತರಮಣಿಯ ಅಪ್ರತಿಮ ಲಾವಣ್ಯವು ಹೆಚ್ಚುಹೆಚ್ಚಾಗಿ ತೋರಹತ್ತಿತು. ಸೈನಿಕನು ಈ ಚಿತ್ರವನ್ನು ಕೊಂಡುಕೊಳ್ಳಬೇಕೆಂದು ಇಚ್ಛಿಸಿ,— "ಅಮ್ಮಾ, ಈ ಚಿತ್ರದ ಬೆಲೆಯೇನು?" ಎಂದು ಕೇಳಿದನು.

" ಇದು ಒದಿಕೆಗಳು! " ಎಂದು ಮುದುಕೆಯು ಹೇಳಿದಳು.

ಸೈನಿಕನು ಆಶ್ಚರ್ಯಾನ್ವಿತನಾದನು. ಮುದುಕೆಯು ಚೇಷ್ಟೆಮಾಡುತ್ತಿರಬಹುದೇನು? ಎಂಬ ಸಂದೇಹವು ಅವನಿಗುಂಟಾಯಿತು. ವೃದ್ಧೆಯ ಮುಖಲಕ್ಷಣದಿಂದ ಅವನ ಈ ಸಂಶಯವು ದೂರಾಯಿತು. ಅವನು ಗೊಂದಲದಲ್ಲಿ ಬಿದ್ದುಬಿಟ್ಟನು. ತುಸುಹೊತ್ತಿನಮೇಲೆ ಅವನು—"ಅಮ್ಮಾ, ಒಡೆಯುವವರಾರು? " ಎಂದು ಕೇಳಿದನು.

" ಈ ಚಿತ್ರವು ಯಾವಳದೋ ಅವಳು! " ಎಂದು ಮುದುಕೆಯು ಹೇಳಿದಳು.

" ಅವಳ ಹೆಸರೇನು? "

" ನನಗೆ ಗೊತ್ತಿಲ್ಲ. "

" ಈ ಚಿತ್ರವು ನಿನಗೆ ಎಲ್ಲಿ ಸಿಕ್ಕಿತು? "

" ಈ ನಗರದಲ್ಲಿರುವ ಒಬ್ಬ ಹೆಂಗಸು ಇದನ್ನು ನನಗೆ ಕೊಟ್ಟಳು. ಅವಳು ಒಬ್ಬ ಶ್ರೀಮಂತನ ಮನೆಯಲ್ಲಿ ದಾಸಿಯಾಗಿರುವಳು. "

" ನೀನು ಚಿತ್ರಿತಳಾದ ರಮಣಿಯ ಹೆಸರನ್ನು ಹೇಳಿದೆಯಾದರೆ, ನಾನು ನಿನಗೆ ಹತ್ತು ಅಸರಫಿಗಳನ್ನು ಇನಾಮು ಕೊಡುವೆನು. "

" ಸರದಾರಸಾಹೇಬ, ನಾನು ಅವಳ ಹೆಸರನ್ನು ಹೇಳಿದರೆ, ಭಯಂಕರವಾದ ಶಿಕ್ಷೆಗೆ ಗುರಿಯಾಗುವ ಸಂಭವವುಂಟು! ಆದರೂ ಚಿಂತೆಯಿಲ್ಲ. ತಮ್ಮಂಥವರು ಕೇಳುವಿರೆಂದಬಳಿಕ ಒಲ್ಲೆನ್ನಲಿಕ್ಕೆ ಬರದಂತಾಗಿದೆ. "

ಸೈನಿಕನು ಮುದುಕೆಯ ಧನಲೋಭವನ್ನು ಭಾವಿಸಿ ನಕ್ಕು, ಹತ್ತು ನಾಣ್ಯಗಳನ್ನು ಅವಳ ಕೈಯಲ್ಲಿಕೊಟ್ಟು—" ಹೇಳು ನೋಡೋಣ," ಎಂದು ಅಂದನು.

" ಅವಳ ಹೆಸರು ಗುಲಸಾನಾ " ಎಂದು ಮುದುಕೆಯು ಹೇಳಿದಳು.

" ಇವಳು ಯಾರು? ಎಲ್ಲಿರುವಳು? ಎಂಬದನ್ನು ಬಲ್ಲೆಯಾ? "

" ಸಾಹೇಬ, ಇದು ನನಗೆ ಗೊತ್ತಿಲ್ಲ. "

" ನೀನು ಇವಳ ಹೆಸರನ್ನು ಹೇಗೆ ತಿಳಿದೆ? "

" ನನಗೆ ಈ ಚಿತ್ರವನ್ನು ಕೊಟ್ಟ ದಾಸಿಯ ಮುಖದಿಂದ."

" ನೀನು ಈ ಚಿತ್ರವನ್ನು ಎಷ್ಟಕ್ಕೆ ಮಾರಲಿಕ್ಕೆ ತಕ್ಕೊಂಡೆ? '

" ನಾನು ಇದಕ್ಕೆ ಬೆಲೆಯನ್ನು ಕೊಟ್ಟಿಲ್ಲ. ಆ ದಾಸಿಯ ಬಳಿಯಲ್ಲಿ ಐದು ಚಿತ್ರಗಳನ್ನು ಮಾರಲಿಕ್ಕೆ ತಕ್ಕೊಂಡೆನು. ಆಗ ಅವಳು ಇದನ್ನು ನನಗೆ ಇನಾಮು ಕೊಟ್ಟಳು. "

" ಈ ಚಿತ್ರವು ಯಾರದು? ಅವಳೆಲ್ಲಿರುವಳು? ಎಂಬಬಗ್ಗೆ ಆ ದಾಸಿಯನ್ನು ವಿಚಾರಿಸಲಿಲ್ಲವೇನು? "

" ಕೇಳಿದೆನು; ಆದರೆ ಅವಳು ಹೆಸರೊಂದನ್ನು ಹೇಳಿದಳು. ಉಳಿದ ಸಂಗತಿಗಳನ್ನು ಹೇಳಲಿಲ್ಲ. ಇದಕ್ಕಾಗಿ ನಾನು ಅವಳನ್ನು ಬಹಳವಾಗಿ ಪೀಡಿಸಿದೆನು; ಆದರೂ ಅವಳು ಹೇಳಲಿಕ್ಕೆ ಒಪ್ಪಲಿಲ್ಲ. ಚಿತ್ರಾಂಕಿತ ಸ್ತ್ರೀಯಳ ಹೆಸರನ್ನು ಯಾರಮುಂದೆಯೂ ಹೇಳಲಿಕ್ಕಾಗದೆಂದು ನಿರ್ಬಂಧ ಪಡಿಸಿದ್ದಾಳೆ. "

"ನೀನು ಈ ಚಿತ್ರವನ್ನು ಪುಕ್ಕಟೆಯಾಗಿ ಮಾರುವೆ ಏಕೆ? ಐದು ಒದಿಕೆಗಳಿಗೆ ಈ ಚಿತ್ರವನ್ನು ಮಾರುವದರಿಂದ ನಿನಗೆ ಲಾಭವೇನು?"

"ಆ ದಾಸಿಯು ಹೀಗೆಯೇ ಇದನ್ನುಮಾರಬೇಕೆಂದು ಹೇಳಿದ್ದಾಳೆ."

"ಇದರಲ್ಲಿ ಅವಳ ಉದ್ದೇಶವೇನು?"

"ಸರದಾರಸಾಹೇಬ, ಅವಳ ರಹಸ್ಯವನ್ನು ನಾನರಿಯೆನು! ಈ ಚಿತ್ರವನ್ನು ಐದು ಒದಿಕೆಗಳಿಗೆ ಮಾರುವಿಯಾದರೆ, ತರುಣನಾದ ಸಾಹಸಿಯು ಮಾತ್ರ ಇದನ್ನು ಕೊಳ್ಳಲೊಪ್ಪುವನೆಂದೂ, ಅವನು ನಿನ್ನನ್ನು ಬಹುಕಾಲ ನೆನೆಸುವನೆಂದೂ ಆ ದಾಸಿಯು ಹೇಳಿದ್ದಾಳೆ. ಹಾಗೇ ಆಗಲೆಂದು ಹೇಳಿ, ವಚನಬದ್ಧಳಾಗಿ ಅವಳಿಂದ ಈ ಚಿತ್ರವನ್ನು ತೆಗೆದುಕೊಂಡು ಬಂದಿದೇನೆ."

“ನಾನು ಇವಳಾರೆಂಬದನ್ನು ಗೊತ್ತುಮಾಡಿಕೊಳ್ಳಬೇಕಾಗಿದೆ! ನೀನು ಈ ಕೆಲಸಕ್ಕೆ ಸಹಾಯ ಮಾಡಿದೆಯಾದರೆ, ಬೇಡಿದಷ್ಟು ಹಣ ವನ್ನು ಕೊಡುವೆನು. ಆ ದಾಸಿಯ ಮನಒಲಿಸು. ಅವಳಿಗೆ ಹಣದ ಆಶೆಯನ್ನು ತೋರಿಸು. ಇನ್ನು ಮೂರು–ನಾಲ್ಕು ದಿವಸಗಳ ತರು ವಾಯ ನಾನು ಮತ್ತೆ ನಿನ್ನಬಳಿಗೆ ಬರುವೆನು. ನೀನೆಲ್ಲಿರುವೆ?”

“ಜನಾಬ, ನಾನು ದಿನಾಲು ಈ ಹೊತ್ತಿನಲ್ಲಿ ಇಲ್ಲಿಯೇ ಚಿತ್ರ ಗಳನ್ನು ಮಾರುತ್ತ ಕುಳಿತುಕೊಳ್ಳುತ್ತೇನೆ.”

ಸೈನಿಕನು ಆ ಚಿತ್ರಕಾರನಿಗೆ ಮತ್ತೆ ಎರಡು ಅಸರಫಿಗಳನ್ನು ಕೊಟ್ಟು, ಚಿತ್ರಗಳನ್ನು ತಕ್ಕೊಂಡು, ಮನೆಯಕಡೆಗೆ ನಡೆದನು. ಹೋಗಹೋಗುತ್ತ ಅವನು ಚಿತ್ರದ ವಿಚಿತ್ರ ಚೆಲುವಿಯ ಬಗ್ಗೆ ಯೋಚ ನೆಯಲ್ಲಿ ಮಗ್ನನಾದನು. ಬಲಿಷ್ಠವಾದ ಕುದುರೆಯು ವಿಚಾರತಂದ್ರಿ ಯಲ್ಲಿರುವ ಅವನನ್ನು ಬೇಗನೆ ಮನೆಗೆ ಮುಟ್ಟಿಸಿತು. ಸೈನಿಕನು ಕುದುರೆಯಿಂದಿಳಿದನು. ಸೇವಕನು ಬಂದು ಕುದುರೆಯನ್ನು ತಕ್ಕೊಂಡು ಹೋದನು. ಸೈನಿಕನು ತನ್ನ ದಿವಾಣಖಾನೆಯನ್ನು ಪ್ರವೇಶಿಸಿದನು.

ಒಬ್ಬ ಸ್ನೇಹಿತನು ಇವನ ಹಾದಿಯನ್ನು ನೋಡುತ್ತ ದಿವಾ ಣಖಾನೆಯಲ್ಲಿ ಕುಳಿತುಕೊಂಡಿದ್ದನು. ಸೈನಿಕನು ಒಳಹೊಕ್ಕ ಕೂಡಲೆ ಆ ಗೆಳೆಯನು—“ಏನು ಸರದಾರಸಾಹೇಬ, ಇಂದು ಮನೆಗೆ ಬರುವ ದಕ್ಕೆ ತಮಗೆ ಇಷ್ಟೊಂದು ತಡವೇಕಾಯಿತು?” ಎಂದು ಕೇಳಿದನು.

ನಮ್ಮ ಪೂರ್ವಪರಿಚಿತ ಸೈನಿಕನ ಹೆಸರು ಶಿಕಂದರಖಾ. ಇವನು ಅಕಬರಬಾದಶಹನ ಮನ್ಸಬದಾರನು; ಅಂದರೆ ಸೈನಿಕರ ಮೇಲಧಿಕಾ ರಿಯು. ಐದನೂರು ಸೈನಿಕರು ಇವನ ಅಪ್ಪಣೆಯಂತೆ ನಡೆದುಕೊ ಳ್ಳುತ್ತಿದ್ದರು. ಆ ಶಿಖಂದರಖಾನನು ಆ ಮಿತ್ರನಬಳಿಯಲ್ಲಿ ಕುಳಿತು ಕೊಂಡು—“ಗೆಳೆಯಾ, ಇಂದು ನಾನೊಂದು ವ್ಯಾಪಾರಮಾಡಿದ್ದೇನೆ. ಅದ ಕ್ಕಾಗಿ ಬರುವದಕ್ಕೆ ತಡವಾಯಿತು” ಎಂದು ಹೇಳಿದನು.

“ಅದೆಂತಹ ವ್ಯಾಪಾರ?” ಎಂದು ಆ ಸ್ನೇಹಿತನು ಕೇಳಿದನು.

“ಇಂದು ಮನೆಗೆ ಬರುವಾಗ್ಗೆ ಪೇಟೆಯಲ್ಲಿ ಹಾಯ್ದು ಬಂದೆನು. ಕೆಲವು ಚಿತ್ರಗಳನ್ನು ಮಾರಲಿಕ್ಕೆ ತಕ್ಕೊಳ್ಳುವ ಮನಸ್ಸಾಯಿತು. ಮೂರು ಚಿತ್ರಗಳನ್ನು ಕೊಂಡುಕೊಂಡೆನು.”

“ಇದರಲ್ಲಿ ಆಶ್ಚರ್ಯವೇನು? ಮನ್ಸಬದಾರರಾದ ತಾವು ಬಹುಶಃ ಸುಂದರಿಯರ ಚಿತ್ರಗಳನ್ನು ಪ್ರೀತಿಸಿರಬಹುದು.”

“ನೀನನ್ನುವದು ನಿಜವು, ಸುಳ್ಳಲ್ಲ. ನಾನು ಮಾರಲಿಕ್ಕೆ ತಕ್ಕೊಂಡ ಮೂರೂ ಚಿತ್ರಗಳು ರಮಣಿಯರವು. ಎರಡು ಚಿತ್ರಗಳ ವ್ಯಾಪಾರದ ವಿಷಯವಾಗಿ ಆಶ್ಚರ್ಯಕರವಾದ ಸಂಗತಿಯೇನೂ ಇಲ್ಲ. ಮೂರನೆಯದೊಂದು ಚಿತ್ರದ ಬಗ್ಗೆ ಮಾತ್ರ ನಾನು ಬಹು ಗೊಂದಲದಲ್ಲಿ ಬಿದ್ದಿದ್ದೇನೆ.

“ಚಿತ್ರವನ್ನು ಮಾರಲಿಕ್ಕೆ ತೆಗೆದುಕೊಂಡದ್ದರಿಂದ ತೊಂದರೆಗೊಳಗಾದೆಯಾ? ಅದೇಕೆ? ಆ ರಮಣಿಯು ನಿನ್ನ ಮನಸ್ಸನ್ನಪಹರಿಸಿದಳೇನ.? ಹೀಗೆ ಕಂಡಕಂಡ ಹೆಂಗಸರಿಗೆ ಮನಸೋಲುವದು ನಿನಗೆ ತರವಲ್ಲ.”

ಶಿಕಂದರನು ಗಹಗಹಿಸಿನಕ್ಕು—“ಈ ಚಿತ್ರವನ್ನು ನೋಡು, ಇದನ್ನು ನಾನು ಎಷ್ಟು ಬೆಲೆಕೊಟ್ಟು ಕೊಂಡಿರಬಹುದೆಂಬವನ್ನು ಹೇಳಬಲ್ಲೆಯಾ?” ಎಂದು ಕೇಳಿದನು.

ಉದಾರನಾದ ನೀನು ಈ ಚಿತ್ರಕ್ಕೆ ಒಂದೆರಡು ಅಸರಫಿಗಳನ್ನು ಕೊಟ್ಟಿರಬಹುದು!

ಐದು ಒದಿಕೆಗಳ ವಿನಿಮಯದಿಂದ ನಾನು ಈ ಚಿತ್ರವನ್ನು ತಂದಿದ್ದೇನೆ!

ಏನು, ಐದು ಒದಿಕೆಗಳಿಗೆ ಚಿತ್ರವೇ? ಆಶ್ಚರ್ಯವು! ಒದೆಯುವವರಾರು? ಒದಿಸಿಕೊಳ್ಳುವವರಾರು?

ಚಿತ್ರಿತರಮಣಿಯು ಒದೆಯುವವಳು. ತೆಗೆದುಕೊಂಡವನು ಒದಿಸಿಕೊಳ್ಳುವವನು. ಹಾಗಾದರೆ, ತಾವು ಇಂದು ರಮಣಿಯ ಪಾದತಾ

ಡನೆಯಿಂದ ಪವಿತ್ರರಾಗಿಯೇ ಬಂದಿರೇನು?

ಇಲ್ಲ, ಈ ವಿಧಿಯು ಮುಂದೆ ಆಗತಕ್ಕದ್ದದೆ. ಸದ್ಯಕ್ಕೆ ನಾನು ಇದನ್ನು ಪುಕ್ಕಟೆಯಾಗಿ ತಂದಿದ್ದೇನೆ. ಚಿತ್ರಾಂಕಿತರಮಣಿಯ ಅಪ ರೂಪ ರೂಪವೂ, ವಿಚಿತ್ರ ಬೆಲೆಯೂ ನನ್ನ ತಲೆಯನ್ನು ಕೆಡಿಸಿ ಬಿಟ್ಟವೆ!

"ಇಂತಹ ವ್ಯಾಪಾರವನ್ನೇಕೆ ಮಾಡಿದೆ? ಈಗಲಾದರೂ ಏನಾ ಯಿತು? ಈ ಚಿತ್ರವನ್ನು ತಿರುಗಿ ಕೊಟ್ಟು ಬಂದುಬಿಡು! ಇಲ್ಲವೆ ಸುಟ್ಟುಬಿಡು!"

"ಹೀಗೆ ಮಾಡುವದಕ್ಕೆ ಸಾಧ್ಯವಿಲ್ಲ! ಆ ಚಿತ್ರವನ್ನಾದರೂ ತುಸು ನೋಡು."

ಸ್ನೇಹಿತನು ಆ ಚಿತ್ರವನ್ನು ನೋಡಿದನು. ಅಂಕಿತವಾದ ರೂಪವು ಅಪ್ರತಿಮವಾಗಿತ್ತು. ಅವನು ಆ ಚಿತ್ರವನ್ನು ಶಿಕಂದರನ ಕೈಯಲ್ಲಿ ಕೊಟ್ಟು—"ಈ ರಮಣಿಯು ಶ್ರೇಷ್ಠತಮ ಸುಂದರಿಯಾಗಿರುವದು ನಿಜವು; ಆದರೂ ನೀನು ಈ ಅಜ್ಞಾತರಮಣಿಯ ಆಶೆಯನ್ನು ಮಾಡು ವದು ತರವಲ್ಲ; ಯಾಕಂದರೆ, ರೂಪದ ಮೋಹವು ಉನ್ನತಿಯನ್ನಿಚ್ಛಿ ಸುವ ನಿನ್ನನ್ನು ಹಾಳುಮಾಡದಿರದು. ಈಗಲೆ ಸಾವಧನಾಗು. ಈ ಹೆಂಗಸು ಚತುರೆಯಾಗಿರುವಂತೆ ತೋರುವಳು, ಪರಸ್ತ್ರೀಯನ್ನು ಇಚ್ಛಿ ಸುವ ನಿನ್ನನ್ನು ನಾಶಮಾಡುವಳು" ಎಂದು ಹೇಳಿದನು.

ಇವಳಾರೆಂಬದನ್ನು ನೀನು ಬಲ್ಲೆಯಾ? ಚದುರೆಯಾಗಿರುವಳೆಂದು ಹೇಗೆ ಹೇಳಿದೆ?

ಇವಳನ್ನು ನಾನರಿಯೆನು. ಮುಖಲಕ್ಷಣದಿಂದ ಬುದ್ಧಿವಂತೆಯಾ ಗಿರುವಳೆಂದು ತರ್ಕಿಸಬಹುದಾಗಿದೆ.

ಇವಳ ಹೆಸರು "ಗುಲಸಾನಾ."

ಮಹಾಶಕ್ತಿಶಾಲಿನಿಯಾದ ಹೆಂಗಸು. ನೀನು ಇವಳ ಉಸಾಬ ರಿಗೆ ಹೋಗಬೇಡ.

ಇವಳಾರೆಂಬದು ಗೊತ್ತಿಲ್ಲವೆಂದು ಹೇಳುತ್ತಿರುವೆ. ಮಹಾಶಕ್ತಿಯುಳ್ಳವಳೆಂದೂ ಹೇಳುತ್ತಿರುವೆಯಲ್ಲ!

ಯಾರು? ಎಲ್ಲಿರುವಳು? ಎಂಬದನ್ನರಿಯದಿದ್ದರೂ, ಗುಲಸಾನೆಯೆಂಬ ಚತುರಳೂ, ಶಕ್ತಿಶಾಲಿನಿಯೂ ಆದ ಹೆಂಗಸಿರುವಳೆಂದು, ನಾನು ಜನರ ಮುಖದಿಂದ ಕೇಳಿದ್ದೇನೆ.

ಮಿತ್ರನೇ, ಏನೇ ಆಗಲಿ, ಈ ಕೆಲಸವನ್ನು ಇಷ್ಟಕ್ಕೇ ಬಿಡೆನು. ಅವಳ ಶಕ್ತಿಯನ್ನೂ, ಚಾತುರ್ಯವನ್ನೂ ನೋಡಿಯೇ ಬಿಡುವೆನು! ನೀನು ಈ ಕೆಲಸಕ್ಕೆ ವಿಘ್ನಮಾಡಬೇಡ.

ಈ ಸಮಯದಲ್ಲಿ ಒಬ್ಬ ಸೇವಕನು ಬಂದು, ಶಿಕಂದರನಿಗೆ ಸಲಾಂ ಮಾಡಿ ಬಾದಶಹರವರು ತಮ್ಮನ್ನು ಕೂಡಲೇ ಕರೆದುಕೊಂಡು ಬರುವಂತೆ ಅಪ್ಪಣೆಮಾಡಿರುವರೆಂದು ಹೇಳಿದನು. ಶಿಕಂದರನ ಮಿತ್ರನು ತನ್ನಮನೆಗೆ ಹೊರಟು ಹೋದನು. ಶಿಕಂದರನು ಚಿತ್ರಗಳನ್ನು ಒತ್ತಟ್ಟಿಗೆ ಭದ್ರವಾಗಿಟ್ಟು, ಬಾದಶಹನ ದರ್ಶನಕ್ಕೆ ಹೊರಡಲು ಸಿದ್ಧನಾದನು.

## ಎರಡನೆಯ-ಪರಿಚ್ಛೇದ.



ರಾತ್ರಿಯ ಎಂಟು ಗಂಟೆಯಾಗಿರಬಹುದು. ಶುಕ್ಲಪಕ್ಷದ ಚಂದ್ರಮನು ಆಕಾಶದಲ್ಲಿ ವಿರಾಜಿಸುತ್ತಲಿದ್ದನು. ಭಾರತದ ಸಾಮ್ರಾಟನೂ, ಮೊಗಲ ಅರಸರಲ್ಲಿ ಅತ್ಯಂತ ವೈಭವಶಾಲಿಯೂ ಆದ ಅಕಬರನು ಅರಮನೆಯಲ್ಲಿಯ ಗುಪ್ತಾಲೋಚನೆಯ ಕೋಣೆಯಲ್ಲಿ ಕುಳಿತಿದ್ದನು. ಕೈಯಲ್ಲಿ ಒಂದು ಪತ್ರವಿತ್ತು. ಬಾದಶಹನು ಒಮ್ಮೊಮ್ಮೆ ಆ ಪತ್ರದ ಕಡೆಗೆ ನೋಡುತ್ತಿದ್ದನು. ನಡುನಡುವೆ ವಿಚಾರಪರನಾಗಿ ಕುಳಿತುಕೊಳ್ಳುತ್ತಿದ್ದನು. ಒಬ್ಬ ದೂತನು ದೂರದಲ್ಲಿ ಕೈಕಟ್ಟಿಕೊಂಡು ನಿಂತಿದ್ದು,

ಪತ್ರವಾಚನದಿಂದುಂಟಾದ ಬಾದಶಹನ ವಿಕಾರಗಳನ್ನು ನೋಡುತ್ತಲಿದ್ದನು.

ಪಕ್ಕದಲ್ಲಿಯೇ ಯಮುನಾನದಿಯು ಹರಿಯುತ್ತಲಿತ್ತು. ಪ್ರವಾಹದ ಶೀಕರಗಳಿಂದೊಡಗೂಡಿದ ಸಾಯಂಕಾಲದ ಗಾಳಿಯು ಬಾದಶಹನ ಜೀವರಹನಿಗಳನ್ನೊರಿಸುತ್ತಲಿತ್ತು. ಸುಗಂಧದ ಎಣ್ಣೆಯ ನಾಲ್ಕಾರು ದೀಪಗಳು ಉರಿಯುತ್ತಲಿದ್ದವು. ಗೂಟಗಳ ಮೇಲೆ ಅಲ್ಲಲ್ಲಿ ಅದೇ ಅರಳಿದ ಹೂವಿನ ಮಾಲೆಗಳು ತೂಗಹಾಕಲ್ಪಟ್ಟಿದ್ದವು. ಇವುಗಳಿಂದ ಆ ಕೋಣೆಯು ಸುವಾಸನೆಯಿಂದ ತುಂಬಿಹೋಗಿತ್ತು. ಯಮುನಾನದಿಯ ಕಲನಾದವು ಇಂಪಾಗಿ ಕೇಳಬರುತ್ತಲಿತ್ತು. ಮೃದುವೂ ಎತ್ತರವೂ ಆದ ಗಾದಿಯ ಮೇಲೆ, ತೆಕ್ಕೆಗೆ ಹೊಂದಿ ಕುಳಿತ ಬಾದಶಹನ ಲಕ್ಷವು ಈ ಕಲನಾದದ ಕಡೆಗಾಗಲಿ, ಸುವಾಸನೆಯ ಕಡೆಗಾಗಲಿ ಇದ್ದಿದ್ದಿಲ್ಲ. ಪತ್ರದಲ್ಲಿ ಬರೆದ ಸಂಗತಿಗಳ ವಿಚಾರದಲ್ಲಿ ಆವನು ತಲ್ಲೀನನಾಗಿ ಹೋಗಿದ್ದನು.

ಕೆಲವು ಹೊತ್ತಿನಮೇಲೆ ಬಾದಶಹನು ದೂರದಲ್ಲಿ ನಿಂತುಕೊಂಡಿದ್ದ ದೂತನನ್ನು ಕುರಿತು—"ನಿಜಾಮುತಅಲ್ಲಿ, ಸೋಹಾನಿಯು ಮತ್ತೇನು ಅಂದನು?" ಎಂದು ಕೇಳಿದನು.

"ಖಾವಿಂದ, ಸೋಹಾನಿಯು ಅಂದ ಮಾತುಗಳನ್ನು ತಮ್ಮೆದುರಿಗೆ ಹೇಳುವದಕ್ಕೆ ಸಂಕೋಚವಾಗುತ್ತದೆ. ಅವನ ಗರ್ವವನ್ನು ಎಷ್ಟು ವರ್ಣಿಸಿದರೂ ತೀರದು!" ಎಂದು ಆ ದೂತನು ವಿನಯದಿಂದ ಹೇಳಿದನು.

"ನಿನ್ನ ಕಡೆಗೆ ದೋಷವಿಲ್ಲ, ನೀನು ದೂತನು. ಇದ್ದ ಸಂಗತಿಯನ್ನು ಇದ್ದಂತೆ ಹೇಳಲಿಕ್ಕೇಬೇಕು. ಸೋಹಾನಿಯು ಏನೇನು ಅಂದನೆಂಬದನ್ನು ಅಕ್ಷರಶಃ ಹೇಳು."

"ಜಹಾಪನಾ, ತಮ್ಮ ದೂತನಾದ ನನಗೆ ಅವನ ದರ್ಶನವಾಗುವದೇ ಕಠಿಣವಾಯಿತು. ಆದರೂ ನಾನು ಪ್ರಯತ್ನಪೂರ್ವಕವಾಗಿ

ಅವನನ್ನು ಕಂಡೆನು. ನಿಮ್ಮ ಆಜ್ಞಾಪತ್ರವನ್ನು ಅವನಿಗೆ ಕೊಟ್ಟೆನು ಅವನು ಆ ಪತ್ರವನ್ನೋದಿಕೊಂಡು ಸಿಟ್ಟಿನಿಂದ ಉರಿಯುತ್ತ“ ಅಕಬರ ಬಾದಶಹನೇನು ಹೆಚ್ಚಿನವನೇನು? ನಾನು ಈ ದುರ್ಗದ ಅರಸನಾಗಿರುವಂತೆ ಅವನು ದಿಲ್ಲಿಯ ಅರಸನಾಗಿರುವನು. ನನ್ನ ಮೇಲೆ ಸ್ವಾಮಿತ್ವ ನಡಿಸುವದಕ್ಕೆ ಅವನೆಷ್ಟರವನು? ಅವನಂತೆ ನನ್ನಲ್ಲಿಯೂ ಶಕ್ತಿಯುದೆ. ಅವನ ಮೊಗಲ ಸೈನಿಕರಗಿಂತಲೂ ನನ್ನ ಪಠಾಣ ವೀರರು ಬಲಶಾಲಿಗಳಾಗಿದ್ದಾರೆ. ಹೀಗಿರಲು ನಾನು ಅವನಿಗೆ ಹೆದರಲೇಕೆ? ನಿಮ್ಮ ಬಾದಶಹನಿಗೆ ತನ್ನ ಶೌರ್ಯದ ಗರ್ವವಿದ್ದರೆ, ದಂಡೆತ್ತಿಬರಲಿ! ನಾನು ಅವನ ಭುಜಗಳ ತಿಂಡಿಯನ್ನು ತಗ್ಗಿಸುವೆನು! ಹಿಂದೆ ತಾನು ಕಳಿಸಿದ ಸೈನಿಕರ ಅವಸ್ಥೆ ಯೇನಾಯಿತೆಂಬದನ್ನು ಅವನು ಅರಿಯನೇ? ಈಗಾಗಲೇ ಅದನ್ನು ಮರೆತುಬಿಟ್ಟನೇ?” ಎಂದು ಗದ್ದರಿಸಿ ಪತ್ರವನ್ನು ಬರೆದು ಕೊಟ್ಟು, ನನ್ನನ್ನು ಕಳಿಸಿಕೊಟ್ಟನು. ನಾನು ಆ ಪತ್ರವನ್ನು ತಂದು ನಿಮ್ಮಕಡಿಗೆ ಕೊಟ್ಟಿದ್ದೇನೆ. ಪತ್ರದಲ್ಲಿಯೂ ಇದೇ ಸಂಗತಿಯನ್ನು ಬರೆದಿರಬಹುದೆಂದು ನನಗೆ ತೋರುತ್ತದೆ.

ಅಕಬರನು ಕ್ರೋಧವಶನಾಗಿ ರಭಸದಿಂದ ಕಾಲನ್ನು ನೆಲಕ್ಕಪ್ಪಳಿಸಿ —“ ಎಲಾ ಸೋಹಾನಿ, ಇಷ್ಟೊಂದು ಗರ್ವಿಷ್ಠನಾದೆಯಾ? ನಿನ್ನ ರಾಜ್ಯವೆಷ್ಟು? ಸೇನೆಯೆಷ್ಟು? ಇಂತಹ ಕ್ಷುದ್ರ ಮನುಷ್ಯನು ಪ್ರಬಲ ಪರಾಕ್ರಮಿಗಳಾದ ದಿಲ್ಲಿಯ ಸಾಮ್ರಾಟರನ್ನು ಎದುರಿಸಬೇಕೇ? ಬಂಡುಗಾರರಿಗೆ ಯಾವ ಅವಸ್ಥೆಯಾಗುವದೆಂಬದನ್ನು ನಾನು ಅವನಿಗೆ ಕೂಡಲೇ ತೋರಿಸಿಕೊಡಬೇಕಾಗಿದೆ. ಅವನ ದೇಹವನ್ನು ನಾಯಿಗಳಿಂದ ತಿನಿಸುವೆನು. ಶಿಕಂದರಖಾನು ಇನ್ನೂ ಬರಲಿಲ್ಲವೇನು?” ಎಂದು ಕೇಳಿದನು.

ಶಿಕಂದರಖಾನು ಬಾಗಿಲ ಹೊರಗೆನಿಂತುಕೊಂಡು, ಈ ಎಲ್ಲ ಮಾತುಗಳನ್ನು ಕೇಳುತ್ತಲಿದ್ದನು. ಅವನು ಕೂಡಲೇ ಒಳಗೆ ಹೋಗಿ, ಬಾದಶಹನಿಗೆ ಕುರ್ನಿಸಮಾಡಿ ನಿಂತುಕೊಂಡನು. ಅಲ್ಲಿ ನಿಂತಿರುವ ಸೈನಿ

ಕನು ಶಿಕಂದರಖಾನನನ್ನು ನೋಡಿ, ಅತ್ಯಂತ ಆಶ್ಚರ್ಯವನ್ನು ಹೊಂದಿದನು. ತೀಕ್ಷ್ಣದೃಷ್ಟಿಯ ಬಾದಶಹನು ಸೈನಿಕನ ಈ ಅವಸ್ಥೆಯನ್ನು ನೋಡಿ—"ನಿಜಾಮತಲ್ಲಿ, ನೀನು ಇವನನ್ನು ನೋಡಿ, ಈಮೇರೆಗೆ ಗಾಬರಿಯಾದದ್ದೇಕೆ? " ಎಂದು ಕೇಳಿದನು.

ಖಾವಿಂದ, ಈ ಜಗತ್ತಿನಲ್ಲಿ ಒಂದೇ ಮುಖಲಕ್ಷಣವುಳ್ಳ ಇಬ್ಬರು ಮನುಷ್ಯರಿರುವದನ್ನು ಇಂದು ನೋಡಿದೆನು. ನಾನು ಈವೀರನನ್ನು ನೋಡಿ, ಇವನು ಸೋಹಾನಿಯೆಂದು ಭ್ರಾಂತನಾಗಿ, ಆಶ್ಚರ್ಯಾನ್ವಿತನಾದೆನು.

ಬಾದಶಹನು ನಗೆಮೊಗದಿಂದ—"ನಿಜವಾಗಿಯೂ ಆ ನರಾಧಮನು ಇವನಂತೆಯೇ ಇರುವನೇ?" ಎಂದು ಕೇಳಿದನು.

ಜಹಾಪನಾ, ನಿಮಗೆ ನನ್ನ ಮಾತಿನಲ್ಲಿ ವಿಶ್ವಾಸಹುಟ್ಟಲಿಕ್ಕಿಲ್ಲ. ಆದರೆ ಈ ಇಬ್ಬರ ಮುಖಲಕ್ಷಣದಲ್ಲ ಬಹಳ ಸಾಮ್ಯವದೆ. ಇಬ್ಬರನ್ನು ಒಂದೇ ಕಡೆಯಲ್ಲಿ ನಿಲ್ಲಿಸಿದರೆ, ಇವನೇ ಸೋಹಾನಿಯೆಂದು ಗೊತ್ತುಹಿಡಿಯುವದಕ್ಕಾದೀತೋ ಇಲ್ಲವೋ ಎಂಬದು ಸಂದೇಹದ ವಿಷಯವಾಗಿದೆ! ನಾನಿದುವರೆಗೆ ಇಷ್ಟೊಂದು ಸಾಮ್ಯವಿರುವ ಮನುಷ್ಯರನ್ನು ನೋಡಿರಲಿಲ್ಲ!

ಬಾದಶಹನು— " ಸರಬತ್‌–ಸರಬತ್ " ಎಂದು ಗಟ್ಟಿಯಾಗಿ ಉಚ್ಚರಿಸಿದನು. ದಾಸಿಯು ಸುಪರ್ಣಪಾತ್ರೆಯಲ್ಲಿ ಸರಬತ್ತು ತೆಗೆದುಕೊಂಡು ಬಂದು, ಬಾದಶಹನಿಗೆ ಕೊಟ್ಟಳು. ಅಕಬರನು ಅದನ್ನು ಕುಡಿದು, ಪಾತ್ರೆಯನ್ನು ದಾಸಿಯ ಕೈಯಲ್ಲಿಕೊಟ್ಟನು. ಶಾಂತನಾದ ಅಕಬರನು ಶಿಖಂದರಖಾನನ ಕಡೆಗೆ ನೋಡಿದನು. ಶಿಕಂದರನು ಪುನಃ ಕುರ್ನಿಸಮಾಡಿ, ವಿನಯದಿಂದ ನಿಂತುಕೊಂಡನು.

" ಶಿಖಂದರಖಾ, ನಿನ್ನ ಶೌರ್ಯವನ್ನು, ಯುದ್ಧಕುಶಲತೆಯನ್ನು ನಾನು ಬಲ್ಲೆನು. ಈಗ ನಾನು, ನಿನಗೊಂದು ಮಹತ್ವದ ಕೆಲಸವನ್ನು ಒಪ್ಪಿಸುತ್ತೇನೆ. ನೀನು ನಾಳೆಯೇ ಐವತ್ತು ಜನ ಸೈನಿಕರನ್ನು ಕರೆದುಕೊಂಡು, ಈದಲಗಡದಮೇಲೆ ಸಾಗಿಹೋಗು. ನೀನು ಈ ಸೈನಿಕರ

ಸಹಾಯದಿಂದಲೂ, ನಿನ್ನ ಚಾತುರ್ಯದಿಂದಲೂ ರಕ್ತಪಾತವಿಲ್ಲದೆ ಸೋಹಾನಿಯನ್ನು ಹಿಡಿದುಕೊಂಡುಬಂದು ನನಗೆ ಒಪ್ಪಿಸಬೇಕು. ಸೋಹಾನಿಯ ಹೆಂಡತಿಯು ಸಾಹಸಿಕಳೂ, ಚತುರಳೂ ಆಗಿರುವ ಳೆಂದು ನಾನು ಕೇಳುತ್ತೇನೆ. ನೀನು ಸೋಹಾನಿಯನ್ನು ಹಿಡಿಯಬೇಕಾದರೆ, ಮೊದಲು ಅವನ ಹೆಂಡತಿಯನ್ನು ಕೈವಶಮಾಡಿಕೊಳ್ಳಬೇಕು. ಇಲ್ಲವಾದರೆ ನಿನ್ನಿಂದ ಸೋಹಾನಿಯನ್ನು ಹಿಡಿದು ತರುವದಕ್ಕಾಗಲಾರದು. ಈ ಪ್ರಸಂಗದಲ್ಲಿ ನೀನು ಸೋಹಾನಿಯ ಹೆಂಡತಿಯ ಮರ್ಯಾದೆಯ ರಕ್ಷಣೆಗಾಗಿ ತುಂಬಾ ಎಚ್ಚರದಿಂದಿರಬೇಕು. ನೀನು ಅವಳ ಮರ್ಯಾದೆಗೆ ಹಾನಿಯನ್ನುಂಟುಮಾಡಿದರೆ, ಭಯಂಕರವಾದ ಶಿಕ್ಷೆಗೆ ಗುರಿಯಾಗುವೆ!"

ಬಾದಶಹನ ಈ ಅಪ್ಪಣೆಯನ್ನು ಕೇಳಿ, ಶಿಖಂದರಖಾನು ಗೊಂದಲದಲ್ಲಿ ಬಿದ್ದನು. ಸಂಗಡ ಬರತಕ್ಕವರು ಐವತ್ತೇ ಜನರು! ಶೂರತನವನ್ನೂ, ಕೌಶಲ್ಯವನ್ನೂ, ತೋರಿಸಬೇಕಾದದ್ದು ಹೆಂಗಸಿನ ಬಳಿಯಲ್ಲ! ಅಂಬಬಳಿಕ ಶಿಖಂದರಖಾನು ವಿಚಾರಗ್ರಸ್ತನಾದದ್ದರಲ್ಲಿ ಆಶ್ಚರ್ಯವೇನು?

ಶಿಕಂದರನು ಬಾದಶಾಹೀ ಸೈನ್ಯದಲ್ಲಿ ಸೇರಿ, ಬಹುದಿವಸಗಳಾಗಿರಲಿಲ್ಲ. ಒಂದೆರಡುವರ್ಷಗಳಲ್ಲಿಯೇ ಅವನು ತನ್ನ ಶೂರತನದಿಂದಲೂ, ಜಾಣ್ಮೆಯಿಂದಲೂ ಐನೂರು ಸೈನಿಕರ ಮೇಲಧಿಕಾರವನ್ನು ಹೊಂದಿದ್ದನು. ಇದು ಅವನ ಅಭ್ಯುದಯದ ಕಾಲವಾಗಿತ್ತು. ಈ ಸಮಯದಲ್ಲಿ ಅವನು ಹಿಂದೆ ಬಿದ್ದರೆ ನಡೆಯುವಂತಿದ್ದಿಲ್ಲ. ಅವನು ಮನಸ್ಸಿನಲ್ಲಿ ಯೋಚಿಸಹತ್ತಿದನು—"ಮಹಾಪರಾಕ್ರಮಶಾಲಿಯಾದ ಬಾದಶಹನು ಆ ಸ್ತ್ರೀಯ ಸಾಹಸವನ್ನೂ, ಜಾಣತನವನ್ನೂ ಕೊಂಡಾಡುತ್ತಿರುವನು; ಅಂದಬಳಿಕ ಆವಳು ಸಾಮಾನ್ಯ ಹೆಂಗಸಲ್ಲವೆಂಬದು ನಿರ್ವಿವಾದವಾದದ್ದು. ನಾನು ಅವಳನ್ನು ಕೈವಶಮಾಡಿಕೊಳ್ಳಲಾರದವನಾದರೆ, ಈವರೆಗೆ ದೊರಕಿಸಿದ ಗೌರವಕ್ಕೆ ಜಲಾಂಜಲಿ ಕೊಡಬೇಕಾಗುವದು! ಈ ಪ್ರಸಂಗದಲ್ಲಿ ನಾನು ಮಾಡಲೇನು? ಏನೇ ಆಗಲಿ, ಹಿಂಜರಿದು ಉಪಯೋಗವಿಲ್ಲ! ಎಷ್ಟಾ

ದರೂ ಅವಳು ಹೆಂಗಸು, ಅವಳನ್ನು ಅಂಕೆಯಲ್ಲಿ ತೆಗೆದುಕೊಳ್ಳುವದು ದೊಡ್ಡಮಾತಲ್ಲ! ”

ಶಿಖಂದರಖಾನನು ವಿಚಾರಪರನಾಗಿರುವದನ್ನು ನೋಡಿ, ಬಾದಶಹನು— “ ವೀರನೇ, ನನ್ನ ಅಪ್ಪಣೆಯನ್ನು ಕೇಳಿ, ನೀನು ಹೆದರಿದೆಯೇನು? ನೀನು ಬಹು ಶೂರನಿರುವೆಯೆಂದು ನನ್ನ ಗ್ರಹಿಕೆಯು. ಹಳದೀಘಟ್ಟದ ಯುದ್ಧದಲ್ಲಿ ವ್ಯಕ್ತವಾದ ನಿನ್ನ ಪರಾಕ್ರಮವನ್ನು ನಾನು ಮರೆಯುವದು ಹೇಗೆ? ನೀನಿಂಥ ಧೈರ್ಯಶಾಲಿಯಾಗಿರುವೆಯೆಂದೇ ನಾನು ನಿನ್ನನ್ನು ಈ ಕೆಲಸಕ್ಕೆ ನೇಮಿಸಿದ್ದೇನೆ. ಸೋಹಾನಿಯನ್ನು ಸೋಲಿಸುವದು ಅರಿದಾದದ್ದಲ್ಲ.ಹೀಗೆ ಮಾಡಿದ್ದಾದರೆ, ಅವನು ನಮ್ಮಕೈಯಲ್ಲ ಸಿಗುವಂತಿಲ್ಲ. ಯಾಕಂದರೆ, ಶೂರನಾದ ಅವನು ಜೀವವಿರುವವರೆಗೆ ತನ್ನ ಅಪಜಯವನ್ನು ಒಪ್ಪಿಕೊಳ್ಳತಕ್ಕವನಲ್ಲ. ಅವನು ಪ್ರಾಣವಿರುವವರೆಗೆ ಹೋರಾಡುವನು. ಅನಿರ್ವಾಹದ ಪ್ರಸಂಗಬಂದರೆ, ವಿಷತಿಂದು ಸಾಯುವನು; ಆದರೆ ನನಗೆ ಜೀವಂತ ಸೋಹಾನಿಯು ಬೇಕಾಗಿದ್ದಾನೆ. ಕಾರಣ ನಾನು ನಿನಗೆ ಹೀಗೆ ಅಪ್ಪಣೆಯನ್ನು ಮಾಡಬೇಕಾಯಿತು. ಸೋಹಾನಿಯ ಹೆಂಡತಿಯು ಬಹು ಗರ್ವಿಷ್ಠಳಾಗಿದ್ದಾಳೆ. ನನ್ನ ಸೈನಿಕರನ್ನು ಅಪಮಾನಪಡಿಸಿದ್ದಾಳೆ. ಅವಕ್ಕಾಗಿ ನಾನು ಅವಳನ್ನು ನನ್ನ ದಾಸಿಯರ ದಾಸಿಯನ್ನಾಗಿ ಮಾಡಬೇಕಾಗಿದೆ. ಅದಕ್ಕಾಗಿ ಸೋಹಾನಿಯನ್ನೂ, ಅವನ ಹೆಂಡತಿಯನ್ನೂ ಸೆರೆಹಿಡಿದು ತಂದು, ನನಗೊಪ್ಪಿಸಲಿಕ್ಕೆ ಬೇಕು, ಎಂದು ಹೇಳಿದನು.

ಬಾದಶಹನು ತುಸುಹೊತ್ತು ಸುಮ್ಮನೆ ಕುಳಿತನು. ತರುವಾಯ ಎದ್ದುನಿಂತು—“ಶಿಕಂದರಖಾ, ಈದಲಗಡಕ್ಕೆ ಹೋಗುವ ಮಾರ್ಗವನ್ನೂ, ಅಲ್ಲಿಯ ಸ್ಥಿತಿಯನ್ನೂ ಈ ದೂತನಿಂದ ತಿಳಿದುಕೊಳ್ಳು. ನೀನು ನಾಳೆಯೇ ಇಲ್ಲಿಂದ ಹೊರಡು. ಈ ಕೆಲಸದಲ್ಲಿ ನೀನು ಯಶಸ್ವಿಯಾಗದಿದ್ದರೆ, ನಾನು ನಿನ್ನನ್ನು ಕಠಿಣವಾದ ಶಿಕ್ಷೆಗೆ ಗುರಿಮಾಡದಿರೆನು. ಇದನ್ನು ಯಾವಾಗಲೂ ಮನಸ್ಸಿನಲ್ಲಿರಿಸಿ, ಕೆಲಸಮಾಡುತ್ತಹೋಗು, ಎಂದು ಹೇಳಿ ಬೇರೆ ಕಡೆಗೆ ಹೊರಟುಹೋದನು.

ಶಿಕಂದರಖಾನನು ದೂತನಿಂದ ತಿಳಿಯತಕ್ಕ ಸಂಗತಿಯನ್ನು ತಿಳಿದುಕೊಂಡು ಮನೆಗೆ ಬಂದನು. ದಿವಾಣಖಾನೆಯನ್ನು ಪ್ರವೇಶಿಸಿ, ಅಲ್ಲಿರುವ ಕುರ್ಚಿಯ ಮೇಲೆ ಕುಳಿತುಕೊಂಡು ವಿಚಾರಮಾಡಹತ್ತಿದನು. ಮುದುಕೆಯ ಬಳಿಯಲ್ಲಿ ಚಿತ್ರವನ್ನು ಮಾರಲಿಕ್ಕೆ ತಕ್ಕೊಂಡದ್ದು, ಸ್ನೇಹಿತನು ಆ ಚಿತ್ರವು ಗುಲಸಾನೆಯದೆಂದು ಹೇಳಿದ್ದು, ಬಾದಶಹನು ಅಪ್ಪಣೆಮಾಡಿದ್ದು ಮೊದಲಾದ ಸಂಗತಿಗಳು ಅವನ ಮನಸ್ಸಿನಲ್ಲಿ ಬರತೊಡಗಿದವು. ಅವನು ಬಹಳಹೊತ್ತು ವಿಚಾರಮಾಡಿ ಬೇಸತ್ತನು. ತರುವಾಯ ಗುಲಸಾನೆಯ ಚಿತ್ರವನ್ನು ಹೊರಗೆ ತೆಗೆದು ನೋಡಹತ್ತಿದನು. ಚಿಂತಾಗ್ರಸ್ತವಾದ ಅವನ ಮುಖವು ಅಪ್ರತಿಮ ಸೌಂದರ್ಯದ ನೋಟದಿಂದ ಪ್ರಫುಲ್ಲಿತವಾಯಿತು. ಅವನು ಮನಸ್ಸಿನಲ್ಲಿಯೇ–ಇದೆಂತಹ ಅಪ್ರತಿಮ ರೂಪವು! ಎಷ್ಟು ನೋಡಿದರೂ ಮನಸ್ಸಿಗೆ ತೃಪ್ತಿಯಾಗಲೊಲ್ಲದು. ಚಿತ್ರದರ್ಶನದಿಂದ ಇಷ್ಟೊಂದು ಆನಂದವಾಗುತ್ತಿರಲು, ಪ್ರತ್ಯಕ್ಷದರ್ಶನದಿಂದ ಎಷ್ಟು ಆನಂದವಾಗಬಹುದೆಂಬದನ್ನು ಹೇಳಲಿಕ್ಕೆ ಬರುವಂತಿಲ್ಲ. ಇವಳು ಯಾರಾಗಿರಬಹುದು? ಚಿತ್ರ ಮಾರುವ ಮುದುಕೆಯು ಇವಳ ಹೆಸರೊಂದನ್ನು ಹೇಳಿದಳು. ನನ್ನ ಸ್ನೇಹಿತನು ಇವಳೊಬ್ಬ ರಾಜದ್ರೋಹಿಯ ಹೆಂಡತಿಯೆಂದು ಹೇಳಿದನು. ಯಾರಾದರೇನು? ನಾನು ಇವಳನ್ನೊಮ್ಮೆಯಾದರೂ ನೋಡಲೇಬೇಕು. ಹಾಗಾದರೆ ನಾನು ಇವಳನ್ನು ಎಲ್ಲಿ ಹುಡುಕಲಿ? ಇವಳನ್ನು ನೋಡದ ಹೊರತು ಶಾಂತಿಯು ದೊರೆಯುವಂತಿಲ್ಲ. ಇಂತಹ ಸಮಯದಲ್ಲಿ ಬಾದಶಹನು ಒಂದು ಕೆಲಸದ ಹೊರೆಯನ್ನು ಹೊರಿಸಿದ್ದಾನೆ, ಈಗ ನಾನು ಯಾವದಕ್ಕೆ ಮುಂದುವರೆಯಲಿ? ಬಾದಶಹನ ಅಪ್ಪಣೆಯನ್ನಂತೂ ಮೀರುವಂತಿಲ್ಲ! ಮನಸ್ಸಿನ ಆಸೆಯನ್ನೂ ಬಿಡುವಂತಿಲ್ಲ! ಇದೆಂತಹ ವಿಷಮ ಸಮಯವು!

ಶಿಕಂದರನು ಪುನಃಚಿತ್ರವನ್ನು ನೋಡಿದನು. ದೃಷ್ಟಿಯನ್ನು ಬೇರೆಕಡೆಗೆ ತಿರುಗಿಸುವದಕ್ಕಾಗಲಿಲ್ಲ. ಎವೆಯಿಕ್ಕದೆ ಅದನ್ನು ನೋಡಹತ್ತಿದನು. ರೂಪೋನ್ಮಾದವು ಅವನನ್ನು ಎಚ್ಚರದಪ್ಪಿಸಿಬಿಟ್ಟಿತು.

ಅಭಿಜ್ಞರಾದ ವೈದ್ಯರೇ, ರೂಪೋನ್ಮಾದವು ಯಾವ ತರದ ಜಡ್ಡೆಂ

ಬದನ್ನು ಹೇಳಬಲ್ಲಿರಾ? ಇದೊಂದು ಮಿದುಳಿನ ವಿಚಾರದ ಜಾಡ್ಯವೆಂದು ನೀವು ಹೇಳುವಿರೇನು? ಕಲ್ಪನಾ ಸೃಷ್ಟಿಯಲ್ಲಿ ಸ್ವೇಚ್ಛೆಯಿಂದ ವಿಹರಿಸುತ್ತಿರುವ ಕವಿಗಳೇ, ಸೌಂದರ್ಯದಲ್ಲಿ ಉನ್ಮಾದಕಾರಿತ್ವದ ಶಕ್ತಿಯು ಹೇಗೆ ಬಂತೆಂಬದನ್ನು ಹೇಳುವಿರಾ? ರೂಪೋನ್ಮಾದಗ್ರಸ್ತನು ಜಗತ್ತಿನ ಪ್ರತಿಯೊಂದು ವಸ್ತುವನ್ನು ನಿಮ್ಮಂತೆ ಪ್ರೇಮಪೂರ್ಣದೃಷ್ಟಿಯಿಂದ ನೋಡಬಲ್ಲನೇನು? ತರ್ಕಶಾಸ್ತ್ರ ವಿಶಾರದರಾದ ಪಂಡಿತರೇ, ರೂಪದಲ್ಲಿ ಉನ್ಮಾದನಾಕಾರಿಯಾದ ಶಕ್ತಿಯು ಹೇಗೆ ಬಂದಿತೆಂಬದನ್ನು ತರ್ಕಿಸಬಲ್ಲಿರಾ? ರೂಪೋನ್ಮಾದನು ಸ್ವಾರ್ಥ ರಹಿತವಾದ ಪ್ರೇಮದ ಅನುಭವತೆಗೆದುಕೊಳ್ಳಲು ಸಮರ್ಥನಾದಾನೇನು?

ವಾಚಕಮಹಾಶಯ, ಯಾರು ಏನೇ ಹೇಳಲೊಲ್ಲರೇಕೆ, ರೂಪದಲ್ಲಿ ಉನ್ಮಾದಕ ಶಕ್ತಿಯಿರುವದು ನಿಜವು. ಅದರಿಂದ ರೂಪೋನ್ಮಾದಗ್ರಸ್ತರು ಪತಂಗವು ದೀಪದಲ್ಲಿ ಬೀಳುವಂತೆ, ಸೌಂದರ್ಯ ರಸಪಾನದಲ್ಲಿ ಮತ್ತರಾಗಿ ಹೋಗುವರು.

ಶಿಕಂದರಖಾನನು ಬಹಳ ಹೊತ್ತಿನವರೆಗೆ ಹಾಗೆಯೇ ಕುಳಿತುಕೊಂಡನು. ವಿಚಾರ ಮಾಡಿಮಾಡಿ ಬೇಸತ್ತ ಅವನಿಗೆ ಮದಿರೆಯು ಬೇಕಾಯಿತು. ಅವನು ದಾಸಿಯನ್ನು ಕೂಗಿ, ಸಿರಾಜಿಯನ್ನು ತರುವಂತೆ ಆಜ್ಞಾಪಿಸಿದನು. ದಾಸಿಯು ಸಿರಾಜಿಯನ್ನು ತಂದುಕೊಟ್ಟಳು. ಶಿಕಂದರನು ಅದನ್ನು ಸೇವಿಸಿ, ಸಮಾಧಾನಹೊಂದಿ, ನಿರ್ಲಜ್ಜತನದಿಂದ ಬಳಿಯಲ್ಲಿರುವ ಚಿತ್ರವನ್ನು ದಾಸಿಗೆ ತೋರಿಸಿ—"ಈ ಚಿತ್ರವು ಯಾರದೆಂಬದನ್ನು ನೀನು ಬಲ್ಲೆಯಾ?" ಎಂದು ಕೇಳಿದನು.

ದಾಸಿಯು ಏನೆಂದು ಹೇಳುವಳು? ಸರದಾರ ಸಾಹೇಬರಹುಚ್ಚತನವನ್ನು ನೋಡಿ, ಮುಗುಳು ನಗೆಯಿಂದ ನಗುತ್ತ ಆಸ್ಥಳದಿಂದ ಹೊರಟು ಹೋದಳು.

ಶಿಕಂದರನು ಮತ್ತೆ ಆ ಚಿತ್ರವನ್ನು ನೋಡುತ್ತ ಕುಳಿತುಕೊಂಡನು. ಸುರೆಯ ಅಮಲಿನಿಂದ ಕ್ರಮವಾಗಿ ಅವನ ಕಣ್ಣು ಮುಚ್ಚತೊಡಗಿದವು. ಅವನು ಆ ಕುರ್ಚಿಯ ಮೇಲೆಯೇ ಒರಗಿಕೊಂಡುಬಿಟ್ಟನು.

ಶಿಕಂದರನು ಜಾಗೃತ್ ಸ್ವಪ್ನಾವಸ್ಥೆಗಳ ನಡುವಿನ ಸ್ಥಿತಿಯಲ್ಲಿ ಕೆಲ ಹೊತ್ತು ಹಾಗೇ ಬಿದ್ದುಕೊಂಡನು. ಚಿತ್ರಾಂಕಿತಳಾದ ರಮಣಿಯು ತನ್ನೆ ದುರಿಗೆ ನಿಂತುಕೊಂಡು—"ತರುಣನೇ, ಇಕೋ ಬಂದಿರುವೆನು. ನೀನು ನನ್ನನ್ನು ಹಿಡಿಯಬಲ್ಲೆಯಾ? ಮಹಾನ್ ಪರಾಕ್ರಮಿಗಳೂ, ಶ್ರೇಷ್ಠಚತು ರರೂ ಆದ ಅನೇಕ ಜನರು, ನನ್ನ ಬಳಿಯಲ್ಲಿ ಅಪಜಯವನ್ನೊಪ್ಪಿಕೊಂಡು ಮೋರೆಬಣಗಿಸಿಕೊಂಡು ಹೋಗಿಪ್ಪಾರೆ. ನಿನ್ನಂಥವನ ಪಾಡೇನು?" ಎಂದು ಅಂದಂತೆ ಅವನಿಗೆ ಭಾಸವಾಯಿತು. ಶಿಕಂದರನು ಅವಳನ್ನು ಹಿಡಿಯು ವದಕ್ಕೆಂದು ಏಳಲುದ್ಯುಕ್ತನಾದನು; ಆದರೆ ಅವನಿಂದ ಏಳುವದಾಗಲಿಲ್ಲ. ಚಿತ್ರಿತರಮಣಿಯು ಶಿಕಂದರನ ಒದ್ದಾಟವನ್ನು ನೋಡಿ, ತನ್ನ ಕೈಯಲ್ಲಿ ರುವ ಹೂವಿನ ತುರಾಯಿಯನ್ನು, ತಿರಸ್ಕಾರದಿಂದ ಒಗೆದು ಹೋಗಿ ಬಿಟ್ಟಂತೆ ಶಿಕಂದರನಿಗೆ ಕಾಣಿಸಿತು. ಏಳಲಾರದ ಅವನು ಸೇವಕರಿಗೆ ಅವಳನ್ನು ಹಿಡಿಯುವಂತೆ ಆಜ್ಞೆಮಾಡಿದನು. ಸೇವಕರಾರೂ ಇವನ ಬಡಬಡಿಕೆಗೆ ಉತ್ತರ ಕೊಡಲಿಲ್ಲ. ಶಿಕಂದರನು ಹಾಗೇಯೇ ಬಿದ್ದು ಕೊಂಡುಬಿಟ್ಟನು.

ತುಸು ಹೊತ್ತಿನ ಮೇಲೆ ಸೇವಕನು ಬಂದು, ಶಿಕಂದರನನ್ನು ಊಟ ಕ್ಕೆಎಬ್ಬಿಸಿದನು. ಶಿಕಂದರನು ಏಳಲಿಲ್ಲ. ಸೇವಕನು ಕುರ್ಚಿಯ ಮೇಲೆ ಬಿದ್ದುಕೊಂಡಿರುವ ಯಜಮಾನನನ್ನು ಹಾಸುಗೆಯಮೇಲೆ ಮಲಗಿಸಿದನು.

ಶಿಕಂದರನು ಬೆಳಗುಮುಂಜಾವಿನಲ್ಲಿ ಹಾಸುಗೆಯಿಂದೆದ್ದು ಹೊರಗೆ ಬಂದನು. ಬಾದಶಹನ ಅಪ್ಪಣೆಯಂತೆ ಐವತ್ತು ಜನ ಸೈನಿಕರು ಶಿಕಂದ ರನ ಹಾದೀ ನೋಡುತ್ತ ಮನೆಯ ಮುಂದೆ ಕುಳಿತಿದ್ದರು. ಶಿಕಂದರನು ಅವರಲ್ಲಿಯ ಮುಖ್ಯಸ್ಥನನ್ನು ಕರೆದು, ಮುಂದೆ ಸಾಗುವಂತೆ ಅಪ್ಪಣೆ ಮಾಡಿ ದನು. ಅದರಂತೆ ಅವನು ತನ್ನ ಜನರನ್ನು ಕರೆದುಕೊಂಡು ಈದಲಗ ಡದಕಡೆಗೆ ನಡೆದನು.

ಶಿಕಂದರನು ಪ್ರಾತಃಕೃತ್ಯಗಳನ್ನು ತೀರಿಸಿಕೊಂಡು, ಚಪಲವಾದ ಕುದುರೆಯನ್ನೇರಿ, ಈದಲಗಡದ ಮಾರ್ಗವಾಗಿ ಹೊರಟುನಡೆದನು.

———o———

# ಮೂರನೆಯ---ಪರಿಚ್ಛೇದ.



ಈದಲಗಡವು ಸಾತಪುಡಾಪರ್ವತಾವಳಿಯ ಒಂದುಭಾಗದಮೇಲೆ ಇತ್ತು. ಒಂದುಕಾಲದಲ್ಲಿ ಈ ಕೋಟೆಯಮೇಲೆ, ಮೊಗಲರ ಅರ್ಧ ಚಂದ್ರಾಂಕಿತ ಕೆಂಪುವರ್ಣದ ಪತಾಕೆಯು, ಹಾರಾಡುತ್ತಲಿತ್ತು; ಆದರೆ ಈಗ ಸೋಹಾನಿಯು ಈ ಪತಾಕೆಯನ್ನು ಕಿತ್ತಿ ಒಗೆದು, ಇದರ ಸ್ಥಳದಲ್ಲಿ ಪಠಾಣರ ನೀಲವರ್ಣದ ಪತಾಕೆಯನ್ನು ನಿಲ್ಲಿಸಿದ್ದನು. ಸೋಹಾನಿಯು ಮೊದಲು ಈದಲಗಡವನ್ನೂ, ತರುವಾಯ ಸುತ್ತುಮುತ್ತಲಿನ ಪ್ರದೇಶ ವನ್ನೂ ಕೈವಶ ಮಾಡಿಕೊಂಡು, ತನ್ನದೊಂದು ಸ್ವತಂತ್ರರಾಜ್ಯ ವನ್ನು ಮಾಡಿಕೊಂಡಿದ್ದನು; ಮತ್ತೂ ಈ ರಾಜ್ಯಕ್ಕೆ ಸೋಹಾನಿ-ಗಂಜ ಎಂದು ಹೆಸರಿಟ್ಟಿದ್ದನು.

ಅಕಬರನು ಈ ಮೊದಲು ಸೋಹಾನಿಯನ್ನು ಹಿಡಿಯುವದಕ್ಕೆ ಎರಡುಸಾರೆ ಸೈನ್ಯವನ್ನು ಕಳಿಸಿದ್ದನು. ಸೋಹಾನಿಯು ಮೊದಲನೆಯಸಾರೆ, ದುರ್ಗವನ್ನೇರಿ ಬರುತ್ತಿರುವ ಮೊಗಲ ಸೈನಿಕರಮೇಲೆ, ಕಲ್ಲುಗಳನ್ನುರುಳಿಸಿ ಅವರನ್ನು ಸಂಹರಿಸಿ ಬಿಟ್ಟನು. ಅಕಬರನು ಎರಡನೆಯಸಾರೆ ಜಹಾಂದರಬೇಗನೆಂಬ ಸೇನಾಪತಿಯ ಕೈಯಲ್ಲಿ, ಅಸಂಖ್ಯ ಸೈನಿಕರನ್ನು ಕೊಟ್ಟು ಈದಲಗಡವನ್ನು ಮುತ್ತುವದಕ್ಕೆ ಕಳಿಸಿದ್ದನು. ಜಹಾಂದರಬೇಗನು ಸೋಹಾನಿಯ ಸಂಗಡ ಎದುರಿಗೆ ನಿಂತು ಯುದ್ಧ ಮಾಡುವದಕ್ಕೆ ಇಚ್ಛಿಸಲಿಲ್ಲ. ಅವನು ಗುಪ್ತರೀತಿಯಿಂದ ಕೋಟೆಯನ್ನು ಪ್ರವೇಶಮಾಡುವ ಮನಸ್ಸು ಮಾಡಿದನು; ಮತ್ತೂ ಆದರಂತೆ ಕೌಶಲ್ಯದಿಂದ ದುರ್ಗವನ್ನು ಹೊಕ್ಕನು. ಈ ಸಂಗತಿಯು ಸೋಹಾನಿಯ ಹೆಂಡತಿಗೆ ಮೊದಲೇ ತಿಳಿದಿತ್ತು. ಅವಳು ತನ್ನ ಗಂಡನನ್ನು ಕೋಟೆಯಲ್ಲಿಯ ನೆಲಮನೆಯಲ್ಲಿ ಮುಚ್ಚಿಟ್ಟಳು; ಜಾಣತನದಿಂದ ಜಹಾಂದರಬೇಗನನ್ನೂ, ಅವನ ಸೈನಿಕರನ್ನೂ ಕೋಟೆಯ ಎರಡು

ಬಾಗಿಲುಗಳ ನಡುವೆ ಸೆರೆಹಿಡಿದಳು; ಮತ್ತೂ ಜಹಾಂದರನಿಗೆ ಅಹಾರದ ಪದಾರ್ಥಗಳು ದೊರೆಯದಂತೆ ಮಾಡಿದಳು. ಇವರಿಂದ ಮೊಗಲ ಸೇನಾಪತಿಯು ಹಣ್ಣಿಗೆ ಬಂದು ಒಪ್ಪಂದಮಾಡಿಕೊಂಡು ಪಾರಾಗಿ ಹೋದನು. ಈ ಸಮಯದಲ್ಲಿ ಅವನು ಸೋಹಾನಿಯ ಹೆಂಡತಿಯನ್ನುದ್ದೇಶಿಸಿ, ನಿನ್ನ ಗಂಡನು ಪ್ರಾಣಭಯದಿಂದ ಇಲಿಯಂತೆ ನೆಲಮನೆಯಲ್ಲಿ ಅಡಗಿಕೊಂಡಿದ್ದಾನೆ. ಅವನು ಒಂದುವೇಳೆ ನಿಜವಾಗಿಯೇ ಪಠಾಣವೀರನಾಗಿದ್ದರೆ, ಎದುರಿಗೆ ನಿಂತು ನನ್ನ ಸಂಗಡ ಯುದ್ಧ ಮಾಡಲಿ" ಎಂದು ಅಂದನು. ಇದಕ್ಕೆ ಉತ್ತರವಾಗಿ ಸೋಹಾನಿಯ ಹೆಂಡತಿಯು ಹೇಳಿದ್ದೇನಂದರೆ—ನನ್ನ ಪತಿಯು ನಿಮ್ಮಂಥ ಕಳ್ಳರೊಡನೆ ಯುದ್ಧಮಾಡಿ, ತನ್ನ ಶಸ್ತ್ರವನ್ನು ಕಲಂಕಿತವನ್ನಾಗಿ ಮಾಡಿಕೊಳ್ಳಲಿಚ್ಛಿಸುವದಿಲ್ಲ. ನೀನು ಒಂದುವೇಳೆ ನಿಜವಾದ ವೀರನಂತೆ ಈದ ಲಗಡವನ್ನು ಮುತ್ತಿದ್ದರೆ, ನನ್ನ ಪತಿಯ ದರ್ಶನ ಲಾಭವು ನಿನಗಾಗುತ್ತಿತ್ತು. ನೀನು ಈಗ ನನ್ನ ಸೆರೆಯಾಳಾಗಿರುವೆ. ಕೋಟೆಯ ಎರಡು ಬಾಗಿಲುಗಳ ನಡುವೆ ಸಿಕ್ಕಿಕೊಂಡಿರುವೆ. ನನ್ನ ಸೈನಿಕರು ನಿನಗೆ ಹೊರಗಿನಿಂದ ಅಹಾರದ ಪದಾರ್ಥಗಳು ಬಂದು ಮುಟ್ಟದಂತೆ ಮಾಡಿದ್ದಾರೆ. ಈಗ ನೀನು ಶಸ್ತ್ರವನ್ನು ಕೆಳಗಿಟ್ಟು, ಈ ರಾತ್ರಿಯಲ್ಲಿಯೇ ನಿನ್ನ ಅನುಚರರೊಡನೆ ಕೋಟೆಯನ್ನು ಬಿಟ್ಟು ಹೋಗಬೇಕು. ಇಲ್ಲವಾದರೆ, ನೀನೂ ನಿನ್ನ ಸೈನಿಕರೂ ಇರುವ ಈ ಸ್ಥಳದಲ್ಲಿ ನೀರು ಪ್ರವೇಶವಾಗುವಂತೆ ಮಾಡಿ, ನಿಮ್ಮೆಲ್ಲರನ್ನು ಕೊಲ್ಲುವದರಲ್ಲಿ ಬರುವದು.

ಜಹಾಂದರಬೇಗನು ಮೊದಲು ಈ ಮಾತಿಗೆ ಒಪ್ಪಿಕೊಳ್ಳಲಿಲ್ಲ. ಆದರೆ ಸೋಹಾನಿಯ ಹೆಂಡತಿಯು, ತಾನಂದಂತೆ ಆ ಸ್ಥಳದಲ್ಲಿ ನೀರು ಪ್ರವೇಶವಾಗುವಂತೆ ಮಾಡಿದ ಬಳಿಕ, ಆ ಪ್ರವಾಹದಲ್ಲಿ ಮುಳುಗಿ ಸಾಯಲಾರದೆ, ಆವನು ಅವಳ ಮಾತಿಗೆ ಒಪ್ಪಿಕೊಂಡನು. ಸೋಹಾನಿಯ ಹೆಂಡತಿಯು ಕೋಟೆಯಬಾಗಿಲವನ್ನು ತೆರೆಯಿಸಿದಳು. ಮೊಗಲ ಸೈನಿಕರೂ, ಸೇನಾಪತಿಯೂ ಜೀವದಿಂದ ಪಾರಾಗಿ, ಕೋಟೆಯಿಂದ ಹೊರ

ಬಿದ್ದರು.

ಜಹಾಂದರಬೇಗನು ಅಪಮಾನಹೊಂದಿ ಕೋಟೆಯಿಂದ ಹೊರ ಬಿದ್ದು ಹೋಗುತ್ತಿರುವ ಸಮಯದಲ್ಲಿ, ಸೋಹಾನಿಯ ಹೆಂಡತಿಯು ಉಚ್ಚಸ್ವರದಿಂದ—“ಖಾನಸಾಹೇಬ, ನೀವು ನಿಜವಾಗಿಯೂ ವೀರ ರಾಗಿರುವಿರಾದರೆ, ಈ ಅಪಮಾನದ ಸೇಡು ತೀರಿಸಿಕೊಳ್ಳುವದಕ್ಕಾಗಿ ಪುನಃ ದಂಡೆತ್ತಿ ಬರ್ರಿ. ಪಠಾಣರನ್ನು ಎದುರಿಸಿ, ನಿಮ್ಮ ಶೌರ್ಯವನ್ನು ವ್ಯಕ್ತಮಾಡಿರಿ. ನಿಮ್ಮ ಆಯುಧವು ನನ್ನ ಬಳಿಯಲ್ಲಿ ಒತ್ತೀಬಿದ್ದಿರು ವದು. ಶಕ್ತಿಯಿದ್ದರೆ, ಕೂಡಿದಾಗ ಬಿಡಿಸಿಕೊಂಡು ಹೋಗಿರಿ. ಬಾದ ಶಹನಿಗೆ ಭೆಟ್ಟಿಯಾಗಿ ಇಲ್ಲಿನಡೆದ ಸಂಗತಿಯನ್ನು ಅವನಿಗೆ ನಿವೇದಿಸಿರಿ; ಮತ್ತೂ ಸೋಹಾನಿಯ ಹೆಂಡತಿಯಿಂದ ನಮಗೆ ಈ ಅವಸ್ಥೆಯುಂಟಾ ಯಿತು. ಸೋಹಾನಿಯ ಕೈಯಲ್ಲಿ ನಾವು ಸಿಕ್ಕಿದ್ದರೆ, ಇದಕ್ಕೂ ಹೆಚ್ಚು ಅಪಮಾನ ಹೊಂದುತ್ತಿದ್ದೆವೆಂಬದನ್ನು ಹೇಳುವದಕ್ಕೂ ಮರೆಯಬೇಡರಿ.” ಎಂದು ಉಪಹಾಸ ಮಾಡಿದಳು. ಜಾಹಂದರಬೇಗನು ರಾಜಧಾನಿಗೆ ತಿರುಗಿ ಬಂದನು. ಬಾದಶಹನಿಗೆ ಭೆಟ್ಟಿಯಾದನು; ಆದರೆ ನಡೆದ ಸಂಗ ತಿಯನ್ನು ಯಥಾರ್ಥವಾಗಿ ಹೇಳಲಿಲ್ಲ; ಆದರೂ ಬಾದಶಹನಿಗೆ ಈ ಸಂಗ ತಿಯು ತಿಳಿಯದಿರಲಿಲ್ಲ. ಅಕಬರನು ಜಹಾಂದರಬೇಗನ ಮೂರ್ಖತನ ವನ್ನೂ, ಸೋಹಾನಿಯ ಹೆಂಡತಿಯ ಚತುರತೆಯನ್ನೂ ಬೇರೆ ಸೈನಿಕ ರಿಂದ ತಿಳಿದುಕೊಂಡನು. ಏಳುನೂರುಜನ ಸೈನಿಕರ ಮೇಲಾಧಿಕಾರಿ ಯಾಗಿದ್ದ ಜಹಾಂದರಬೇಗನನ್ನು, ಐನೂರುಜನ ಸೈನಿಕರ ಮೇಲಧಿ ಕಾರಿಯನ್ನಾಗಿ ಮಾಡಿ ದಕ್ಷಿಣದೇಶಕ್ಕೆ ಕಳಿಸಿಕೊಟ್ಟನು.

ಶಿಕಂದರಖಾನು ಈಸಂಗತಿಯನ್ನು ಅರಿತವನಾಗಿದ್ದನು. ಜಹಾಂ ದರಬೇಗನಂತೆ ತನ್ನ ಅವಸ್ಥೆಯಾಗಬಾರದೆಂದು, ಅವನ ಮನಸ್ಸಿನಲ್ಲಿ ಸದಾ ಕಟಿಯುತ್ತಿತ್ತು. ಅದಕ್ಕಾಗಿ ಅವನು ಹೆಚ್ಚು ಸಾವಧಾನವನ್ನು ಅವಲಂಬಿಸುವದು ಅವಶ್ಯವಾಗಿತ್ತು.

ಶಿಕಂದರಖಾನು ತನ್ನ ಐವತ್ತುಜನ ಸೈನಿಕರೊಡನೆ, ಮೂರು ದಿವಸ ಹಾದಿಯನಡೆದು ಉಜ್ಜಯನಿಯ ಬಳಿಗೆ ಬಂದನು. ಮುಂದೆ

ಎರಡು ಹರದಾರಿಯಮೇಲೆ ಸರ್ದಾರಪುರವಿತ್ತು. ಸರ್ದಾರಪುರದಿಂದ ಮುಂದೆ ಎರಡು ಹರದಾರಿಯಮೇಲೆ ಸಾತಪುಡಾಪರ್ವತವಿತ್ತು. ಈ ಪರ್ವತದಮೇಲೆಯೇ ಈದಲಗಡವಿತ್ತು.

ಶಿಕಂದರಖಾನನು ಸರ್ದಾರಪುರದ ಕಣಿವೆಯನ್ನು ಇಳಿದು ಹೋದ ಬಳಿಕ, ತನ್ನ ಸೈನಿಕರಲ್ಲಿ ಮೂರು ಪಂಗಡಗಳನ್ನು ಮಾಡಿದನು. ವಿದೇಶೀಯ ವ್ಯಾಪಾರಸ್ಥರ ಸೋಗುಹಾಕಿಕೊಂಡು ಬೇರಿ ಬೇರೆಯಾಗಿ ಹೋಗಿ, ಈದಲಗಡವನ್ನು ಪ್ರವೇಶಿಸುವಂತೆ ಅಪ್ಪಣೆ ಮಾಡಿದನು. ಪ್ರಸಂಗಬಿದ್ದಾಗ ಎಲ್ಲರೂ ಒತ್ತಟ್ಟಿಗೆ ಕೂಡಬೇಕಾದರೆ ಹೇಗೆ ಮಾಡಬೇಕೆಂಬದನ್ನು ಚರ್ಚಿಸಿ, ಅದನ್ನು ಗೊತ್ತುಮಾಡಿ ಕೊಂಡನು. ಆಮೇಲೆ ಅವನು ಸೈನಿಕರನ್ನು ಹಿಂದೆಬಿಟ್ಟು ಇರಾಣೀ ವರ್ತಕನ ವೇಷಹಾಕಿಕೊಂಡು ಮುಂದೆ ಸಾಗಿದನು.

ಶಿಕಂದರಖಾನು ಇದುವರೆಗೆ ಈದಲಗಡವನ್ನು ನೋಡಿರಲಿಲ್ಲ. ಅದರಿಂದವನು ಮೆಲ್ಲಮೆಲ್ಲನೆ ಗುಡ್ಡವನ್ನು ಹತ್ತಿ ನಗರವನ್ನು ಪ್ರವೇಶಿಸಿದನು. ಹಾಗೇ ಮುಂದೆ ನಡೆದು ಪೇಟಿಯನ್ನು ಹೊಕ್ಕನು. ಒಂದು ಅಂಗಡಿಯ ಮುಂದೆ ಜನಸಂದಣಿಯು ಕೂಡಿತ್ತು. ಸಿಕಂದರನು ಅಲ್ಲಿಗೆ ಹೋಗಿ ನೋಡಿದನು. ಅಲ್ಲಿ ಒಬ್ಬ ಭಿಲ್ಲಬಾಲಿಕೆಯು ಹಾಡುತ್ತಿದ್ದಳು. ಇದನ್ನು ಕೇಳುವದಕ್ಕಾಗಿ ನೂರಾರು ಜನರು ಕೂಡಿದ್ದರು. ಇವರೆಲ್ಲರು ಗಾಯನವನ್ನು ಕೇಳುವದರಲ್ಲಿ ಮಗ್ನರಾಗಿ ಹೋಗಿದ್ದರು. ಶಿಕಂದರನು ಸಮೀಪದಲ್ಲಿರುವ ಬೇರೊಂದು ಅಂಗಡಿಯಲ್ಲಿ ಪ್ರವೇಶಮಾಡಿದನ. ಅದೊಂದು ವಿಶ್ರಾಂತಿಯ ಮಂದಿರವಾಗಿತ್ತು.

ಶಿಕಂದರಖಾನು ಈ ವಿಶ್ರಾಂತಿ ಮಂದಿರದಲ್ಲಿ ಕುಳಿತುಕೊಂಡನು. ಈ ವಿದೇಶೀಯ ಮನುಷ್ಯನನ್ನು ನೋಡಿ, ಸೇವಕನು ಅಂಗಡಿಯ ಯಜಮಾನನಿಗೆ ಈ ಸಂಗತಿಯನ್ನು ತಿಳಿಸಿದನು. ತುಸು ಹೊತ್ತಿನ ಮೇಲೆ ಒಬ್ಬ ಮುದುಕನು ಶಿಕಂದರನ ಬಳಿಗೆ ಬಂದು, ಚಿರಪರಿಚಿತನಂತೆ ಸಲಾಂಮಾಡಿ, ನಗೆಮೊಗದಿಂದ—"ಸಾಹೇಬ, ತಮ್ಮ ಆಗಮನದಿಂದ ನನ್ನ ಈ ಗೃಹವು ಪವಿತ್ರವಾಯಿತು, ವಿಶ್ರಮಿಸ

ಬೇಕು," ಎಂದು ಹೇಳಿದನು.

ಮುದುಕನಿಗೆ ವಯಸ್ಸು ಬಹಳವಾಗಿದ್ದರೂ, ಅದನ್ನವನು ಮುಚ್ಚಿಕೊಳ್ಳುವದಕ್ಕೆ ಬಹಳವಾಗಿ ಯತ್ನಿಸುತ್ತಿರುವನೆಂಬಂತೆ ಕಂಡು ಬರುವಂತಿತ್ತು. ಅವನು ತನ್ನ ಬಿಳಿಯ ಕೂದಲುಗಳಿಗೆ ಬಣ್ಣಹಚ್ಚಿ ಕೊಂಡು, ಅವನ್ನು ವ್ಯವಸ್ಥೆಯಿಂದ ಇರಿಸಿದ್ದನು. ಬೆಲೆಯುಳ್ಳ ವಸ್ತ್ರ ಗಳನ್ನು ಧರಿಸಿದ್ದನು. ಯಮರಾಜನ ಕಣ್ಣಿನಲ್ಲಿ ಮಣ್ಣು ಉಗ್ಗಲು ಯತ್ನಿಸುವ ಈ ವೃದ್ಧನೇ, ಆ ಅಂಗಡಿಯ ಮಾಲಕನಾಗಿದ್ದನು. ಶಿಕಂ ದರನು—"ಸೇಖಜೀ, ನಾನು ನಿನ್ನ ಈ ವಿಶ್ರಾಂತಿಗೃಹದಲ್ಲಿ ಕೆಲವು ದಿವಸ ಇರಬೇಕೆಂದು ಮಾಡಿದ್ದೇನೆ. ನಾನು ಈ ದೇಶದವನಲ್ಲ; ಬಹು ದೂರದಲ್ಲಿರುವ ಇರಾಣದಿಂದ ವ್ಯಾಪಾರಮಾಡಬೇಕೆಂದು ಇಲ್ಲಿಗೆ ಬಂದಿ ದ್ದೇನೆ. ನೀನು ಬೇಡಿದಷ್ಟು ಹಣವನ್ನು ನಾನು ಕೊಡುವೆನು. ನನ್ನ ಯಾವತ್ತೂ ವ್ಯವಸ್ಥೆಯನ್ನು ನೀನು ಚನ್ನಾಗಿ ಇಡಿಸಲಿಕ್ಕೇ ಬೇಕು,"ಎಂದು ಹೇಳಿ, ಐದು ಅಸರಫಿಗಳನ್ನು ಅವನಿಗೆ ಕೊಟ್ಟನು. ಮುದುಕನು, ಶಿಕಂದರನು ಕೊಟ್ಟ ಹಣದಿಂದ ತುಂಬಾ ಆನಂದಿತನಾ ದನು. ಅವನು ಗಟ್ಟಿಯಾಗಿ ನಕ್ಕು—"ಸಾಹೇಬ, ಈ ಮನೆಯು ನಿಮ್ಮದೇ ಅದೆ. ನೀವು ಇಲ್ಲಿ ಬೇಕಾದಷ್ಟು ದಿವಸ ಇರಲಿಕ್ಕೆ ಅಡ್ಡಿ ಯಿಲ್ಲ"ಎಂದು ಹೇಳಿ, ಸೇವಕನಿಗೆ ಸಂಕೇತಮಾಡಿದನು. ಕೂಡಲೆ ಸೇವ ಕನು ಶಿಕಂದರನನ್ನು ಅಂತಸ್ತಿನ ಮೇಲಿರುವದೊಂದು ಕೋಣೆಗೆ ಕರೆದುಕೊಂಡು ಹೋದನು.

ಸೇವಕನು ತೋರಿಸಿಕೊಟ್ಟ ಕೋಣೆಯಲ್ಲಿ ಶಿಕಂದರನು ವಿಶ್ರಮಿಸಿ ದನು. ಅತಿಥಿಸತ್ಕಾರಪರಾಯಣನಾದ ಸೇಖಜಿಯು ಅವನಿಗೆ ಯಾವ ಕೊರತೆಯನ್ನೂ ಉಂಟುಮಾಡಲಿಲ್ಲ. ಶಿಕಂದರನು ಊಟ-ಉಡಿಗೆಗ ಳನ್ನು ತೀರಿಸಿಕೊಂಡು ಮಲಗಿಕೊಂಡನು. ಈ ಸಮಯದಲ್ಲಿ ಅವನ ಮನಸ್ಸಿನಲ್ಲಿ ಅನೇಕ ವಿಚಾರಗಳು ಬಂದವು, ಆದರೂ ಪಥಕ್ಲಾಂತನಾದ ಅವನು ತೀವ್ರವೇ ನಿದ್ರಾದೇವಿಯನ್ನು ಆಶ್ರಯಿಸಿದನು.

ಶಿಕಂದರನು ಮರುದಿವಸ ನಸುಕಿನಲ್ಲಿಯೇ ಎದ್ದನು. ಸೇವಕನು

ಬಾಗಿಲಲ್ಲಿ ನಿಂತಿದ್ದನು. ಅವನು ಶಿಕಂದರನಿಗೆ ಬೇಕಾದ ಸಾಮಾನು ಗಳನ್ನು ಒದಗಿಸಿಕೊಟ್ಟನು. ಶಿಕಂದರನು ಪ್ರಾತಃಕೃತ್ಯಗಳನ್ನು ತೀರಿ ಸಿಕೊಂಡನು. ಸೇವಕನು ಉಪಹಾರದ ಪದಾರ್ಥಗಳನ್ನೂ, ಕಾಫಿಯ ನ್ನೂ ತಂದಿರಿಸಿದನು. ಶಿಕಂದರನು ಅವನ್ನು ಸೇವಿಸಿ, ಬೇರೆ ಬಟ್ಟೆಗ ಳನ್ನು ಧರಿಸಿ, ಅಲ್ಲಿರುವದೊಂದು ಆರಾಮಕುರ್ಚಿಯ ಮೇಲೆ ಬಿದ್ದು ಕೊಂಡನು. ಈ ಸಮಯದಲ್ಲಿ ವೃದ್ಧ ಶೇಖಜೀಯು ಅಲ್ಲಿಗೆ ಬಂದು ಸಲಾಂ ಮಾಡಿ, ನಗೆಮೊಗದಿಂದ— “ ಸಾಹೇಬ, ಈ ಬಡವನ ಅಪರಾಧವನ್ನು ಕ್ಷಮಿಸಬೇಕು. ನಾನು ಈ ಮುಪ್ಪಿನ ವಯಸ್ಸಿನಲ್ಲಿ ಪ್ರಾಯದ ಹೆಂಗಸನ್ನು ಲಗ್ನ ಮಾಡಿಕೊಂಡು ಸಂಸಾರಸಾಗಿಸುತ್ತಿದ್ದೇನೆ. ಅವಳೇ ಈ ಮನೆಯ ಯಜಮಾನಿಯು. ನಾನು ಕೇವಲ ಅವಳ ಸೇವಕನು, ಎಂದು ಅಂದನು.

ಈ ಅಪ್ರಾಸಂಗಿಕ ಮಾತುಗಳಿಂದ ಶಿಕಂದರನಿಗೆ ಸಿಟ್ಟುಬಂತು. ಆದರೂ ಅವನು ತನ್ನ ಅವಸ್ಥೆಯನ್ನು ತಿಳಿದು, ಮನೋಭಾವವನ್ನು ಗುಪ್ತವಾಗಿಟ್ಟುಕೊಂಡು— “ ನಾನು ಇಲ್ಲಿರುವದಕ್ಕೆ ನಿನ್ನ ಯಜಮಾ ನಿಯು ಒಪ್ಪಿಗೆಯಿತ್ತಿರುವದಷ್ಟೇ? ” ಎಂದು ಕೇಳಿದನು.

“ ನೀವು ಇಲ್ಲಿರುವದಕ್ಕೆ ಅವಳು ಸಮ್ಮತಿಸಿದ್ದಾಳೆ. ನೀವು ಕೊಟ್ಟ ಐದು ಅಸರಫಿಗಳನ್ನು ಅವಳಿಗೆ ಕೊಟ್ಟೆನು. ಅವಳು ಸಂತುಷ್ಟಳಾಗಿ ನಿಮಗೆ ಇರುವದಕ್ಕೆ ಪರವಾನಿಗೆಯನ್ನು ಕೊಟ್ಟಿದ್ದಾಳೆ. ಈ ಕೋಣೆಯು ನನ್ನ ಯಜಮಾನಿಯದು. ಆದರೂ ನಾನು ಇದನ್ನು ನಿಮಗೆ ತೆರವು ಮಾಡಿಕೊಟ್ಟಿದ್ದೇನೆ. ನೀವು ಇಲ್ಲಿ ಬೇಕಾದಷ್ಟು ದಿವಸ ಇರಬಹುದು. ನಾನು ಬಡವನಾಗಿದ್ದರೂ, ನಿಮ್ಮ ಸತ್ಕಾರದಲ್ಲಿ ತುಸುಮಟ್ಟಿಗೂ ಕೊರತೆ ಯುಂಟಾಗದು. ನನ್ನ ಸತ್ಕಾರಪರಾಯಣತೆಗೆ ಮೆಚ್ಚಿ, ಬಾದಶಹನೂ, ಮಹಾರಾಣಿಯೂ ಯಾವಾಗಲಾದರೊಮ್ಮೆ ಇಲ್ಲಿಗೆ ಬರುತ್ತಿರುವರು. ”

“ ಏನಂದೆ? ಬಾದಶಹನು ಇಲ್ಲಿಗೆ ಬರುತ್ತಿರುವನೇ? ಬಾದಶಹ ನೆಂದರೆ ಅಕಬರಶಹನಷ್ಟೇ? ಅವನು ಇಲ್ಲಿಗೆ ಬರುವನೇ?”

ನೀವು ವಿದೇಶೀಯರು. ನಿಮಗೆ ಇಲ್ಲಿಯ ಬಾದಶಹನ ಹೆಸರು ಹೇಗೆ ಗೊತ್ತಾಗಬೇಕು? ಅಕಬರನು ದಿಲ್ಲಿಯ ಬಾದಶಹನು. ಈ ರಾಜ್ಯವು

ಅಕಬರನ ಅಧೀನತೆಗೊಳಗಾದದ್ದಲ್ಲ. ಇದೊಂದು ಸ್ವತಂತ್ರರಾಜ್ಯವು. ಇಲ್ಲಿ ಸ್ವತಂತ್ರ ಅರಸನಿರುವನು. ''

" ಹಾಗಾದರೆ ಇದು ಮೊಗಲರ ರಾಜ್ಯವಲ್ಲವೇನು? "

" ಇದು ಮೊಗಲ ರಾಜ್ಯವಲ್ಲ. ಮಹಬತುದ್ದೌಲಾನಸರತಜಂಗ ಅಲ್ಲಿಸೋಹಾನಿ ಎಂಬವನು ಈ ದೇಶದ ಬಾದಶಹನು. ಅವನಿಗೆ ನನ್ನ ಹೆಂಡತಿಯು ಮಾಡಿದ ಉಪಹಾರವೂ, ಕಾಫಿಯೂ ಬಹಳ ಸೇರುತ್ತದೆ. ಅದಕ್ಕಾಗಿ ಅವನು ಒಮ್ಮೊಮ್ಮೆ ಇಲ್ಲಿಗೆ ಬರುತ್ತಿರುವನು. ''

" ನೀನು ಬಹು ಭಾಗ್ಯವಂತನು. ಅಂತೆಯೇ ಪ್ರತ್ಯಕ್ಷ ಬಾದಶಹನು ನಿನ್ನ ಮನೆಗೆ ಬರುತ್ತಿರುವನು. ''

ಶಿಕಂದರನ ಈ ಮಾತಿನಿಂದ ಸೇಖಜಿಗೆ ಬಹಳ ಆನಂದವಾಯಿತು. ಅವನು— " ಸಾಹೇಬ, ತಾವು ಪರದೇಶದ ವ್ಯಾಪಾರಸ್ಥರು. ನಿಮಗೆ ಬಾದಶಹನಿಂದ ಉಪಕಾರವಾಗಬಹುದು. ನಾನು ನಿಮಗೆ ಬಾದಶಹನ ದರ್ಶನ ಮಾಡಿಸುವೆನು. ನೀವು ಇರಾಣಿವರ್ತಕರಾಗಿದ್ದರೂ, ನಿಮ್ಮ ಮುಖವು ನಮ್ಮ ಬಾದಶಹನಮೋರೆಯಂತೆಯೇ ಅದೆ. ಈ ಮುಖ್ಯ ಸಾದೃಶ್ಯವನ್ನು ನೋಡಿ, ನನಗೆ ಬಹಳ ಆಶ್ಚರ್ಯವಾಗುತ್ತಿರುವದು. ''

ಶಿಕಂದರಖಾನನು ನಕ್ಕು—" ಸೇಖಜಿ, ಹೀಗಿದ್ದರೆ ಎಚ್ಚರದಿಂದಿರು. ನಾನೇ ಬಾದಶಹನೆಂದು ತಿಳಿದು, ನೀನು ಟೊಪ್ಪಿಗೆ ಬೀಳಬಹುದು! '' ಎಂದು ಅಂದನು.

ಸೇಖಜಿಯು ನಿರುತ್ತರನಾಗಿ ನಿಂತನು. ಶಿಕಂದರನು ಅವನನ್ನು ಕುರಿತು— " ಬಾದಶಹನು ಇಲ್ಲಿಗೆ ಯಾವಾಗ್ಗೆ ಬರುವನು? '' ಎಂದು ಕೇಳಿದನು.

ಬಾದಶಹನು ನಿನ್ನೆ ಸಾಯಂಕಾಲದ ಸುಮಾರಕ್ಕೆ ಇಲ್ಲಿಗೆ ಬಂದಿದ್ದನು. ಆದರೆ ಬಹಳಹೊತ್ತು ಕುಳಿತುಕೊಳ್ಳಲಿಲ್ಲ. ಗಡಿಬಿಡಿಯಿಂದ ಕೂಡಲೆ ಎದ್ದು ಹೋದನು. ಅವನು ಹೋದ ತುಸುಹೊತ್ತಿನಲ್ಲಿಯೇ ನೀವು ಬಂದಿರಿ.

" ಹಾಗೆ ಅವಸರದಿಂದ ಎದ್ದು ಹೋದದ್ದೇಕೆ? ''

ಮೊಗಲರು ದಂಡೆತ್ತಿ ಬಂದಿದ್ದಾರಂತೆ. ಅವರು ಗುಪ್ತವೇಷದಿಂದ ನಗರದಲ್ಲಿ ಸಂಚರಿಸುತ್ತಿರುವರೋ ಹೇಗೆಂಬದನ್ನು ನೋಡುವದಕ್ಕೆಂದು ಬಾದಶಹನು ಪಟ್ಟಣದಲ್ಲಿ ಅಡ್ಡಾಡಿದನು. ಆ ಸಮಯದಲ್ಲಿ ಈ ಅಂಗಡಿಗೂ ಬಂದಿದ್ದನು.

ಮೊಗಲರು ದಂಡೆತ್ತಿ ಬಂದ ಸುದ್ದಿಯು ಅವನಿಗೆ ಹೇಗೆ ತಿಳಿಯಿತು?

ಗುಪ್ತಚಾರರು ಸರ್ದಾರಪುರದ ಬಳಿಯಲ್ಲಿ ಮೊಗಲ ಸೈನಿಕರನ್ನು ನೋಡಿ ಬಂದು ಬಾದಶಹನಿಗೆ ಸುದ್ದಿಯನ್ನು ತಿಳಿಸಿದರಂತೆ.

ಬಾದಶಹನು ಯಾರನ್ನಾದರೂ ಹಿಡಿದನೇನು?

ಬಾದಶಹನಿಗೆ ಮೊಗಲನು ಸಿಗಲಿಲ್ಲವಂತೆ. ಅದರಿಂದ ಅವನು ಮೊಗಲರು ದಂಡೆತ್ತಿಬಂದ ಸಂಗತಿಯೇ ಸುಳ್ಳಿರಬಹುದೆಂದು ಭಾವಿಸಿದ್ದಾನೆ.

ಶಿಕಂದರನಿಗೆ ಈ ಮಾತಿನಿಂದ ಸಮಾಧಾನವಾಯಿತು. ಈ ವಿಷಯವಾಗಿ ಹೆಚ್ಚಿಗೆ ಚರ್ಚೆಮಾಡಿದರೆ, ತನ್ನ ನಿಜಸ್ಥಿತಿಯು ಪ್ರಕಟವಾದೀತೆಂದು ತಿಳಿದು— “ ಶೇಖಜೀ, ನನಗೇನು? ದಿಲ್ಲಿಯ ಬಾದಶಹನಾದರೂ ಅಷ್ಟೇ. ಈದಲಗಡದ ಅರಸನಾದರೂ ಅಷ್ಟೇ ನನ್ನಲ್ಲಿ ಕೆಲವು ಬೆಲೆಯುಳ್ಳ ಆಭರಣಗಳಿವೆ. ಅವನ್ನು ಮಾರಬೇಕಾಗಿದೆ. ಕಾರಣ ಹೇಗಾದರೂ ಮಾಡಿ ನನಗೆ ನಿಮ್ಮ “ ಬಾದಶಹನ ದರ್ಶನಮಾಡಿಸು ” ಎಂದು ಹೇಳಿದನು.

ಶೇಖಜಿಯು ನಗೆಮೊಗದಿಂದ— “ ಸಾಹೇಬ, ನೀವು ಚಿಂತಿಸಬೇಡಿರಿ. ಒಂದೆರಡು ದಿವಸಗಳಲ್ಲಿಯೇ ನಿಮಗೆ ಬಾದಶಹನ ಭೆಟ್ಟಿಮಾಡಿಸುವೆನು. ಈಗ ನಾನು ನಿಮಗೊಂದು ಮಾತು ಹೇಳಬೇಕಾಗಿದೆ. ನಿನ್ನೆ ನೀವು ಕೊಟ್ಟ ಐದು ಅಸರಫಿಗಳು ಕೇವಲ ಮನೆಬಾಡಿಗೆಯವಾದವು. ಉಪಹಾರಊಟಗಳಿಗಾಗಿ, ನೀವು ಕೆಲವು ಹಣವನ್ನು ಕೊಡಬೇಕು, ” ಎಂದು ಅಂದನು.

ಶಿಕಂದರನು ಬೇರೆಮಾತಾಡದೆ ಹತ್ತು ಅಸರಫಿಗಳನ್ನು ಅವನ ಕೈಯಲ್ಲಿ ಕೊಟ್ಟನು. ಶೇಖಜಿಗೆ ತುಂಬಾ ಸಂತೋಷವಾಯಿತು. ಶಿಕಂದ

ರನು ಅವನನ್ನು ಕುರಿತು— “ ಸೇಖಜಿ, ಹಣಕ್ಕಾಗಿ ಚಿಂತಿಸಬೇಡ. ನೀನು ಬೇಡಿದಷ್ಟು ಕೊಡುತ್ತೇನೆ. ನೀನು ನನ್ನ ಯಾವತ್ತು ವ್ಯವಸ್ಥೆಯನ್ನು ಉತ್ತಮರೀತಿಯಿಂದ ಇಡಿಸಲಿಕ್ಕೆ ಬೇಕುಮಾತ್ರ, ” ಎಂದು ಹೇಳಿದನು.

ಸೇಖಜಿಯು ಹೊರಟು ಹೋದನು. ಶಿಕಂದರನೊಬ್ಬನೇ ತುಸು ಹೊತ್ತು ಕುಳಿತು ವಿಚಾರಮಾಡಿದನು. ಸೇಖಜಿಯ ವರ್ತನವನ್ನು ನೆನೆದು ಅವನು ಗಹಗಹಿಸಿನಕ್ಕನು. ಸೋಹಾನಿಯ ಚಾತುರ್ಯವನ್ನು, ಅವನಿಗೆ ಮೊಗಲ ಸೈನಿಕರು ಬಂದ ವರ್ತಮಾನತಿಳಿದುದನ್ನು ನೆನೆದು ತುಸುಭಯ ಹೊಂದಿದನು. ಯಾವರೀತಿಯಿಂದ ಸೋಹಾನಿಯನ್ನು ಹಿಡಿಯಬಹುದೆಂದು ಬಹಳವಾಗಿ ಯೋಚಿಸಿದನು; ಆದರೆ ಒಂದೂ ಉಪಾಯವು ತೋಚಲಿಲ್ಲ. ಅವನು ಬಹು ಚಿಂತೆಗೊಳಗಾದನು.

ಅಕಬರನು ಅಪಜಯಪಟ್ಟು ತಿರುಗಿಬಂದ ಸೇನಾಪತಿಗಳಿಗೆ, ಕಠೋರವಾದ ಶಿಕ್ಷೆಯನ್ನು ವಿಧಿಸುವದಕ್ಕೆ ಹಿಂದೆಮುಂದೆ ನೋಡುತ್ತಿದ್ದಿಲ್ಲ. ಈ ಸಂಗತಿಯು ಶಿಕಂದರನಿಗೆ ಗೊತ್ತಿತ್ತು. ಬಾದಶಹನಿಂದ ಭಯಂಕರ ಶಿಕ್ಷೆಯನ್ನು ಹೊಂದುವ ಪ್ರಸಂಗವೆಲ್ಲಿಬರುವದೋ ಎಂದು ಅವನು ಸದಾ ಭಾವಿಸುತ್ತಿದ್ದನು; ಮತ್ತು ಇದನ್ನು ತಪ್ಪಿಸಬೇಕೆಂದು ತುಂಬಾ ಸಾವಧಾನದಿಂದ ವರ್ತಿಸಹತ್ತಿದ್ದನು.

ಈವಲಗಡದ ಸ್ಥಿತಿಗಳನ್ನು ತಿಳಿದುಕೊಳ್ಳುವದು ಶಿಕಂದರನಿಗೆ ಅವಶ್ಯವಾಗಿತ್ತು. ಅದಕ್ಕಾಗಿ ಅವನು ಸಾಯಂಕಾಲದಲ್ಲಿ ಹೊರಟು, ಸಾಧ್ಯವಾದಷ್ಟು ಸಂಗತಿಗಳನ್ನು ತಿಳಿದುಕೊಂಡು ಬಂದನು. ರಾತ್ರಿಯಲ್ಲಿ ಊಟಮಾಡಿ ಮಲಗಿಕೊಂಡನು. ಆದರೆ ಅವನಿಗೆ ನಿದ್ದೆಯು ಹತ್ತಲಿಲ್ಲ. ಅನೇಕ ವಿಚಾರಗಳು ಅವನನ್ನಾವರಿಸಿದವು. ತನ್ನ ಕೆಲಸವು ಸುಲಭವಾಗಿ ನೆರವೇರುವಂತೆ ಅವನಿಗೆ ತೋರಲಿಲ್ಲ. ಅವನು ಚಡಪಡಿಸಹತ್ತಿ, ತುಸುಗಟ್ಟಿಯಾಗಿಯೇ— “ ದೇವರೇ, ಈ ಪ್ರಸಂಗದಲ್ಲಿ ನನಗೆ ನೀನು ತುಂಬಾ ಸಹಾಯಮಾಡು, ” ಎಂದು ಬೇಡಿಕೊಂಡನು.

---

# ನಾಲ್ಕನೆಯ—ಪರಿಚ್ಛೇದ.

ಸುಮಾರು ಐದುತಾಸು ರಾತ್ರಿಯಾಗಿತ್ತು. ಶಿಕಂದರನು ಮಲಗಿದ ಕೋಣೆಯಲ್ಲಿ ದೀಪವಿರಲಿಲ್ಲ. ಭಗವಾನ್ ರಜನೀನಾಥನು ತನ್ನ ಸೌಮ್ಯ ಕಿರಣಗಳಿಂದ ಆಕಾಶದಲ್ಲಿ ಪ್ರಕಾಶಿಸುತಲಿದ್ದನು. ಅವನ ಮಂದಪ್ರಕಾಶವು ಕೋಣೆಯಲ್ಲಿ ಬಿದ್ದಿತ್ತು. ಎಲ್ಲಕಡೆಗೂ ಸ್ತಬ್ಧತೆಯೂ ನೆಲೆಗೊಂಡಿತ್ತು.

ಶಿಕಂದರನ ಮಾತಿಗೆ ಉತ್ತರವಾಗಿ—"ಪ್ರವಾಸಿಯೇ, ಸ್ಥಳವನ್ನು ವಿಚಾರಿಸಿ, ಮನೋಭಾವನೆಯನ್ನು ಪ್ರಕಟಮಾಡಬೇಕು; ಅಲ್ಲದೆ ಸಿಕ್ಕಸಿಕ್ಕಲ್ಲಿ ಮನಸ್ಸಿನ ವಿಚಾರವನ್ನು ಪ್ರಕಟಗೊಳಿಸಲಾಗದು," ಎಂದು ಯಾರೋ ಅಂದರು. ಶಿಕಂದರನು ಅತ್ಯಂತ ವಿಸ್ಮಯಾಪನ್ನನಾಗಿ, ಎದ್ದು ಕುಳಿತನು. ಅವನು ಮಲಗುವ ಮುಂದೆ, ಬಾಗಿಲವನ್ನು ಗಟ್ಟಿಯಾಗಿ ಇಕ್ಕಿ, ಅಗಳಿಯನ್ನು ಹಾಕಿಕೊಂಡು ಮಲಗಿದ್ದನು. ಕೋಣೆಗೆ ಬೇರೆಬಾಗಿಲಗಳಿರಲಿಲ್ಲ. ಹೀಗಿರಲು ಶಿಕಂದರನಿಗೆ ಆಶ್ಚರ್ಯವಾದದ್ದು ಅರಿದಲ್ಲ. ಧ್ವನಿಯ ಮೇಲಿಂದ ನೋಡುತ್ತಿರಲು, ಅದು ಸ್ತ್ರೀಯಳದಾಗಿರುವಂತೆ ಅವನಿಗೆ ತೋರಿತು. ಇಂಥ ರಾತ್ರಿಯಲ್ಲಿ ಬಾಗಿಲವನ್ನಿಕ್ಕಿದ ಕೋಣೆಯಲ್ಲಿ ಯಾವ ಹೆಂಗಸು ಬಂದಿರಬಹುದೆಂದು ಅತ್ತಿತ್ತ ನೋಡಿದನು. ಒಂದು ಮೂಲೆಯಲ್ಲಿ ಒಬ್ಬ ರಮಣಿಯು ನಿಂತುಕೊಂಡಿದ್ದಳು. ಪ್ರಕಾಶವು ಚನ್ನಾಗಿ ಬೀಳದಿರುವ ಮೂಲಕ ಅವಳನ್ನು ಗುರುತಿಸುವಂತಿದ್ದಿಲ್ಲ. ಶಿಕಂದರನು ಅವಳನ್ನು ಕುರಿತು—"ನೀನು ಯಾರು" ಎಂದು ಕೇಳಿದನು.

ಆ ಹೆಂಗಸು ಮಾತಾಡಲಿಲ್ಲ. ಮೆಲ್ಲಮೆಲ್ಲನೆ ಬಂದು ಶಿಕಂದರನ ಹಾಸುಗೆಯ ಬಳಿಯಲ್ಲಿ ನಿಂತುಕೊಂಡಳು. ಶಿಕಂದರನಿಗೆ ಮತ್ತಿಷ್ಟು ಆಶ್ಚರ್ಯವಾಯಿತು. ಅವನು ಮತ್ತೆ—"ನೀನಾರು?" ಎಂದು ಕೇಳಿದನು. ಅವಳು ಉಪಹಾಸಸೂಚಕಸ್ವರದಿಂದ—"ವೀರನೇ, ನೀನು ಹೆದರಿದೆಯೋ?" ಎಂದು ಕೇಳಿದಳು.

ನಾನೊಬ್ಬ ಸೈನಿಕನು. ಯುದ್ಧವು ನನ್ನ ವ್ಯವಸಾಯವು. ರಕ್ತದ ಕಾವಲಿಯು ಹರಿಯುತ್ತಿರುವ, ಹೆಣಗಳ ರಾಶಿಯಿಂದ ತುಂಬಿದ ಪ್ರದೇಶವು ನನ್ನ ಆಟದಸ್ಥಳವು. ಇಂಥ ಸ್ಥಳದಲ್ಲಿ ನಾನು ಯಾವಾಗಲೂ ನಗುತ್ತ ಕಾಲಕಳೆಯಬೇಕಾಗುತ್ತದೆ. ಹೀಗಿರಲು ನಿನ್ನಂಥ ಒಬ್ಬ ಹೆಂಗಸನ್ನು ನೋಡಿ, ನನಗೆ ಹೆದರಿಕೆ ಬರುವದೆಂದರೇನು? ಅಕಸ್ಮಾತ್ತಾಗಿ ನೀನು ಬಂದದ್ದರಿಂದ ನನಗೆ ಬಹಳ ಆಶ್ಚರ್ಯವೆನಿಸಿದೆ. ನೀನು ಯಾರು? ಹೇಳು, ಎಂದು ಅಂದನು.

ಸಾಹೇಬ, ನೀನು ನನ್ನ ಪರಿಚಯವನ್ನು ತೆಗೆದುಕೊಂಡು ಮಾಡುವೆಯೇನು? ನಾನೊಂದು ಉದ್ದೇಶದಿಂದ ಇಲ್ಲಿಗೆ ಬಂದಿದ್ದೇನೆ. ನಾನು ಏಕೆ ಇಲ್ಲಿಗೆ ಬಂದಿರುವೆನೆಂಬದನ್ನು ನೀನು ತರ್ಕಿಸಬಲ್ಲೆಯಾ? ಸಾಧ್ಯವಿರದಿದ್ದರೆ, ಹೇಳುತ್ತೇನೆ ಕೇಳು. ನನ್ನ ಜೀವಿತದ ಸಕಲ ಆಶೆಗಳು ಪೂರ್ಣವಾಗಲಿಲ್ಲ. ನೀನು ಇಷ್ಟೊಂದು ಸುಂದರರೂಪವನ್ನು ತೆಗೆದುಕೊಂಡು ಇಲ್ಲಿಗೇಕೆ ಬಂದೆ? ಎಂದು ಆ ರಮಣಿಯು ಕೇಳಿದಳು.

ಶಿಕಂದರನಿಗೆ ಮತ್ತಿಷ್ಟು ವಿಸ್ಮಯವಾಯಿತು. ಅವನು ಇದುವರೆಗೆ ಅವಳನ್ನು ನೋಡಿರಲಿಲ್ಲ. ಒಬ್ಬ ಅಪರಿಚಿತಳಾದರಮಣಿಯು ನಿಸ್ಸಂಕೋಚದಿಂದ ಈ ಮೇರೆಗೆ ಪ್ರಶ್ನೆ ಮಾಡಿದ್ದನ್ನು ಕೇಳಿ, ಅವನು ಬಹಳ ಗೊಂದಲದಲ್ಲಿ ಬಿದ್ದನು. ಸೋಹಾನಿಯನ್ನು ಕೈಸೆರೆ ಹಿಡಿಯುವದಕ್ಕಿಂತ ಈ ಪ್ರಸಂಗದಿಂದ ಪಾರಾಗುವದು ಬಹಳ ಜಡವೆಂದು ಅವನಿಗೆ ತೋಚಿತು. ಅವನು ಕೆಲಹೊತ್ತು ಯೋಚಿಸಿ, ಸಿಟ್ಟಿನಿಂದ—“ ನಿನ್ನ ಹೆಸರೇನು? ನೀನು ಯಾರು? ಎಂಬದನ್ನು ಕೂಡಲೇ ತಿಳಿಸು. ಇಲ್ಲವಾದರೆ ನಿನ್ನ ಈ ಅತಿ ಪ್ರಸಂಗಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸುವೆನು, ” ಎಂದು ಅಂದನು.

ಪ್ರವಾಸಿಯೇ, ಇಷ್ಟೊಂದು ಸಿಟ್ಟಿಗೇಳುವದಕ್ಕೆ ಕಾರಣವೇನು? ನೀನು ಸೈನಿಕನಾದರೇನಾಯಿತು? ಯುದ್ಧಭೂಮಿಯೂ, ಮನೆಯೂ ಒಂದೇ ಅಲ್ಲ. ಯುದ್ಧಭೂಮಿಯಲ್ಲಿ ಕಠೋರತೆಯಿಂದ ವರ್ತಿಸಿದಂತೆ ಇಲ್ಲಿ ವರ್ತಿಸಿದರೆ ನಡೆಯದು. ಅಂತಃಕರಣಪೂರ್ವಕವಾಗಿ ನನ್ನೊಡನೆ ಮಾತಾಡು.

ಶಿಕಂದರನಿಗೆ ಮತ್ತಿಷ್ಟು ಸಿಟ್ಟು ಬಂತು. ಅವನು—" ಸಾವಧಾನದಿಂದ ಮಾತಾಡು. ಸುಳ್ಳೇ ನನ್ನನ್ನು ಸಿಟ್ಟಿಗೆಬ್ಬಿಸಬೇಡ. ನಾನು ಕೇಳಿದ ಪ್ರಶ್ನೆಗೆ ಉತ್ತರಕೊಡು. ಬಾಯಿಗೆ ಬಂದಂತೆ ಮಾತಾಡಿದರೆ, ಬಹಳ ಸಂಕಟಕ್ಕೊಳಗಾಗುವೆ! " ಎಂದು ಅಂದನು.

ಆ ಸ್ತ್ರೀಯು ಗಹಗಹಿಸಿನಕ್ಕು—" ಅಭಿಸಾರಿಕೆಯು ಇಂಥ ವಿಪತ್ತನ್ನು ಗಣನೆಗೆತರುವದಿಲ್ಲ! " ಎಂದು ಅಂದಳು.

" ಏನು, ನೀನು ಅಭಿಸಾರಿಕೆಯೋ? ಯಾವ ಜಾರನ ಆಶೆಯಿಂದ ಬಂದಿರುವೆ? "

" ನಿನ್ನ ಆಶೆಯಿಂದ, "

" ಏನು, ನನ್ನ ಆಶೆಯಿಂದ ಬಂದಿರುವೆಯಾ? "

" ಹೌದು, ನಿನ್ನ ಪ್ರಾಪ್ತಿಯ ಆಶೆಯಿಂದಲೇ ಬಂದಿದ್ದೇನೆ. ನಿಷ್ಠುರನಾಗಬೇಡ. ದಯದೋರು. ನಿನ್ನ ಈ ರೂಪಸೌಷ್ಟವವನ್ನು ನೋಡಿ, ನಾನು ಮೋಹಿತಳಾಗಿ ಹೋಗಿದ್ದೇನೆ. "

" ಸುಂದರಿ, ನನ್ನೊಡನೆ ಹುಡುಗಾಟವಾಡಬೇಡ. ನಿನಗೆ ಬಹುಪ್ರಕಾರವಾಗಿ ಹೇಳಿಕೊಳ್ಳುತ್ತೇನೆ. ದಯುವಿಟ್ಟು ನೀನಾರೆಂಬದನ್ನು ಹೇಳು.

" ನಾನು ಸೇಖಜಿಯ ತರುಣ ಪತ್ನಿಯು—ನನ್ನ ಹೆಸರು ಕುಲಸಮ. "

ರಮಣಿ, ಈ ತರದ ಅವಿವೇಕತನಕ್ಕೊಳಗಾಗಬೇಡ. ನೀನೊಬ್ಬನ ಧರ್ಮಪತ್ನಿಯು ವ್ಯಭಿಚಾರದಿಂದ ಬಹಳ ಪಾಪಕ್ಕೊಳಗಾಗುವೆ.

ನಿನ್ನ ಈ ಉಪದೇಶವು ನನಗೆ ಬೇಕಾಗಿಲ್ಲ. ಸೈನಿಕನಾದ ನೀನು ಇಲ್ಲಿಗೆ ಬಂದು ನನ್ನನ್ನೇಕೆ ಮೋಹಗೊಳಿಸಿದೆ? ಇದು ನಿನ್ನ ತಪ್ಪು ಅಲ್ಲವೇನು? ಇದರಿಂದ ನಿನಗೆ ಪಾಪಬರಲಿಲ್ಲವೇನು?

ಶಿಕಂದರನು ತನ್ನೆದುರಿಗೆ ನಿಂತಿರುವ ಸ್ತ್ರೀಯು ಅಂಥಿಂಥವಳಲ್ಲವೆಂಬದನ್ನು ಅರಿತುಕೊಂಡನು. ಅವಳೊಡನೆ ಇನ್ನು ಯುಕ್ತಿಪೂರ್ಣವಾಗಿ ಮಾತಾಡಿ ಉಪಯೋಗವಿಲ್ಲೆಂದು ಭಾವಿಸಿ, ಸಿಟ್ಟಿನಿಂದ—" ಸುಂದರಿ, ಸುಮ್ಮನೆ ಇಲ್ಲಿಂದ ಹೊರಟು ಹೋಗು, ಇನ್ನು ಹೆಚ್ಚಿಗೆ ಮಾತಾಡಬೇಡ"

ಎಂದು ಹೇಳಿದನು.

ಆ ಸುಂದರಿಯು ದರ್ಪದಿಂದ—ಮೊಗಲನೇ, ನೀನು ಹೀನಮನುಷ್ಯನಾಗಿರುವೆ. ನಾನು ಪಾಪಗಳಿಸಿಕೊಳ್ಳುವದಕ್ಕೆಲ್ಲಿ ಪ್ರವೃತ್ತಳಾಗಿರುವೆನು? ಸುಂದರವಾದ ವಸ್ತುಗಳನ್ನು ನೋಡಲೆಳಿಸುವದು ಪಾಪವೆ? ಅದೊಂದು ಪಾಪಕೃತ್ಯವಾಗಿದ್ದರೆ, ದೇವರು ಸೃಷ್ಟಿಯಲ್ಲಿ ಸುಂದರವಾದ ಗುಲಾಬಿಹೂಗಳನ್ನು ನಿರ್ಮಿಸುತ್ತಿದ್ದಿಲ್ಲ. ಪೂರ್ಣಕಲೆಗಳಿಂದೊಪ್ಪುತ್ತಲಿರುವ ಚಂದ್ರುವನ್ನು ಉಂಟುಮಾಡುತ್ತಿರಲಿಲ್ಲ. ಈ ವಸ್ತುಗಳನ್ನು ನೋಡಲಿಚ್ಛಿಸಿದರೆ ಪಾಪವುಂಟೆ? ಪಾಪವು ನೋಡುವದರಲ್ಲಿಲ್ಲ. ಪ್ರತ್ಯಕ್ಷ ಉಪಭೋಗ ತೆಗೆದುಕೊಳ್ಳುವದರಲ್ಲದೆ. ಮನಸ್ಸನ್ನು ನಿರ್ಮಲವಾಗಿಟ್ಟುಕೊಂಡು ಯಾರನ್ನು ನೋಡಿದರೆ ಏನಿದೆ?" ಎಂದು ಅಂದಳು.

"ಸುಂದರೀ, ಪರಪುರುಷರನ್ನು ನೋಡುವದಾದರೂ ಪಾಪಕಾರಕವೇ."

ತರುಣನೇ, ಏನು ಮಾಡಲಿ? ಇಷ್ಟೊಂದು ರೂಪಮಂಡಿತೆಯಾದ ನಾನು ಮುದುಕನನ್ನು ಲಗ್ನಮಾಡಿಕೊಂಡಿದ್ದೇನೆ. ಇದಕ್ಕಾಗಿ ನನಗೆ ಮೇಲಿಂದಮೇಲೆ ದುಃಖವಾಗುತ್ತಲಿದೆ. ನಿರಾಶೆಯಿಂದ ಹೃದಯವು ತಲ್ಲಣಗೊಳ್ಳುತ್ತಲಿದೆ. ಇಂದು ತಡೆಯಲಾರದೆ ನಿನ್ನನ್ನು ನೋಡುವದಕ್ಕೊಂದು ಬಂದೆನು. ನಿನ್ನನ್ನು ನೋಡಿದ ಮಾತ್ರದಿಂದ ನನಗೆ ಪಾಪವು ಬಂದಿತೇನು?

ಶಿಕಂದರನು ನಿರುತ್ತರನಾಗಿ ನಿಂತುಕೊಂಡನು. ಯುದ್ಧಭೂಮಿಯಲ್ಲಿ ಶತ್ರುಗಳ ರುಂಡಗಳನ್ನು ಹಾರಿಸುವ ಕೆಲಸಕ್ಕಿಂತಲೂ, ಚತುರಳಾದ ರಮಣಿಯೊಡನೆ ವಾದಮಾಡುವದು ಕಠಿಣಕೆಲಸವೆಂದು ಅವನಿಗೆ ಅನಿಸಿತು. ಶಿಕಂದರನು ಸುಮ್ಮನೆ ನಿಂತುಕೊಂಡದ್ದನ್ನು ನೋಡಿ, ಅವಳು ತಿರಸ್ಕಾರಸೂಚಕ ನಗುವಿನಿಂದ—" ಮೊಗಲನೇ, ನಾನು ಪಾಪಿಯೋ ನೀನು ಪಾಪಿಷ್ಠನೋ ಎಂಬದನ್ನು ವಿಚಾರಮಾಡು. ನಾನು ಪಾಪಕಾರಕ ಕೆಲಸವನ್ನು ಮನಸ್ಸಿನಲ್ಲಿ ಮಾತ್ರ ತಂದಿದ್ದೇನೆ. ನೀನು ಪ್ರತ್ಯಕ್ಷವಾಗಿ ಪಾಪಕೃತ್ಯವನ್ನು ಮಾಡಲು ತೊಡಗಿರುವೆ. ನೀನು ಅತಿ ಹೀನನು! ಮಹಾಪಾಪಿಷ್ಠನು. ! !" ಎಂದು ಅಂದಳು.

ಶಿಕಂದರನು ವಿಸ್ಮಯದಿಂದಲೂ, ಕ್ರೋಧದಿಂದಲೂ—" ನೀನು

ಹೀಗೆ ನನ್ನನ್ನು ನಿಂದಿಸುತ್ತಿರುವದೇಕೆ! " ಎಂದು ಕೇಳಿದನು.

ಅವಳು ತಿರಸ್ಕಾರದಿಂದ—ಅಕಬರಬಾದಶಹನು ನಿನಗೆ ಒಂದು ಕೆಲಸವನ್ನು ಒಪ್ಪಿಸಿದ್ದಾನೆ. ನೀನು ಒಬ್ಬ ಹೆಂಗಸಿನ ರೂಪಕ್ಕೆ ಮರುಳಾಗಿ ಕರ್ತವ್ಯವನ್ನು ಮರೆತುಬಿಟ್ಟಿರುವೆ. ಸದಾ ಆ ರಮಣಿಯ ಧ್ಯಾನದಲ್ಲಿ ಮಗ್ನನಾಗಿರುವೆ. ಇದು ಹೀನಕೆಲಸವಲ್ಲವೇನು? ಎಂದು ಅಂದಳು.

" ನೀನು ಸುಳ್ಳು ಮಾತಾಡುವೆ! "

" ಏನು, ನಾನು ಅಸತ್ಯ ಮಾತಾಡುವೆನೇ? ಈ ಚಿತ್ರವನ್ನು ನೋಡು ಇದು ಯಾರದು? "

ಶಿಕಂದರನು ಆ ಚಿತ್ರವನ್ನು ತೆಗೆದುಕೊಂಡು, ಕಿಡಿಕಿಯಬಳಿಗೆ ಹೋಗಿ ನೋಡಿದನು. ಅದು ಈ ಮೊದಲು ಅವನ ಹತ್ತರ ಇದ್ದ ಗುಲಸಾನೆಯ ಚಿತ್ರವಾಗಿತ್ತು. ಶಿಕಂದರನ ವಿಸ್ಮಯಕ್ಕೆ ಮೇರೆಯಿಲ್ಲದಾಯಿತು. ಅವನು ತುಸುಹೊತ್ತು ಯೋಚಿಸಿ—" ನೀನು ಮುದುಕಗಂಡನನ್ನು ವಂಚಿಸಿ, ಪಾಪಕೃತ್ಯವನ್ನು ಮಾಡಲಿಕ್ಕೆ ಸಿದ್ಧಳಾದವಳು! ಇಂಥ ನೀನು ಯಾವ ಕೆಲಸವನ್ನು ಮಾಡುವದಕ್ಕೂ ಹೇಸುವವಳಲ್ಲ! ನೀನು ಈ ಚಿತ್ರವನ್ನು ಕಳವು ಮಾಡಿರುವೆ! ! " ಎಂದು ಅಂದನು.

ಎಚ್ಚರದಿಂದ ಮಾತಾಡು, ಜನರು ನಿನ್ನ ನಿಜಸ್ಥಿತಿಯನ್ನು ತಿಳಿಯದಿದ್ದರೂ, ನಾನು ನಿನ್ನನ್ನು ಗುರುತಿಸಿದ್ದೇನೆ. ನೀನು ಇರಾಣೀ ವರ್ತಕನಲ್ಲ ಮೊಗಲನು. ಅಕಬರಬಾದಶಹನ ಒಬ್ಬ ಸೇನಾಪತಿಯು.

ಶಿಕಂವರನು ತನ್ನ ಬಳಿಯಲ್ಲಿರುವ ತೀಕ್ಷ್ಣವಾದ ಚೂರಿಯನ್ನು ಹೊರಗೆ ತೆಗೆದನು. ಅದರ ಅಲಗು ಆ ಮಸಗತ್ತಲೆಯಲ್ಲಿ ಲಕಲಕ ಹೊಳೆಯಹತ್ತಿತು. ಇದನ್ನು ನೋಡಿ, ಆ ರಮಣಿಯು ಹೆದರಲಿಲ್ಲ. ಅವಳು ಶಿಕಂಧರನ ಬಳಿಗೆ ಬಂದು—" ರಮಣಿಯ ರೂಪದಿಂದ ಉನ್ಮತ್ತನಾಗಿ ಕರ್ತವ್ಯವನ್ನು ಮರೆತ ನೀನು ಹೆಂಗಸನ್ನು ಕೊಲ್ಲಲಾರೆ. ನಾನು ಎದೆಯನ್ನು ಸೆಟೆಸಿನಿಂತುಕೊಳ್ಳುತ್ತೇನೆ. ನನ್ನನ್ನು ಕೊಲ್ಲುವದು ನಿನಗೆ ಸಾಧ್ಯವಿದ್ದರೆ, ನನ್ನ ಈ ಎದೆಯಲ್ಲಿ ನಿನ್ನ ಆ ಚೂರಿಯನ್ನು ಚುಚ್ಚಿಬಿಡು" ಎಂದು ಹೇಳಿದಳು.

ಶಿಕಂದರು ಕಿಂಕರ್ತವ್ಯಮೂಢನಾಗಿ—“ ಕುಲಸಮು, ನಾನು ನಿನ್ನ ಬಳಿಯಲ್ಲಿ ಪರಾಜಿತನಾದೆನು. ಈ ಚಿತ್ರವು ನಿನಗೆ ಹೇಗೆ ದೊರಕಿತೆಂಬ ದನ್ನಷ್ಟು ನನಗೆ ಹೇಳು ” ಎಂದು ಅಂದನು.

ಇಂದು ರಾತ್ರಿಯಲ್ಲಿ ನೀನು ಈ ಚಿತ್ರವನ್ನು ಏಕದೃಷ್ಟಿಯಿಂದ ನೋಡುತ್ತ ಕುಳಿತಿದ್ದೆ. ಈ ಕೋಣೆಗೆ ಹೊಂದಿಯೇ ನನ್ನ ಕೋಣೆಯದೆ. ನಡುವೆ ಒಂದು ಸಣ್ಣ ಕಿಡಿಕಿಯದೆ. ನಾನು ಈ ಕಿಡಿಕಿಯಲ್ಲಿ ನಿಂತು, ನಿನ್ನ ಈ ಕೆಲಸವನ್ನು ನೋಡುತ್ತಲಿದ್ದೆನು. ಮುಂದೆ ನೀನು ಊಟಕ್ಕೆ ಹೋದೆ. ಆ ಕಾಲದಲ್ಲಿ ಚಿತ್ರವನ್ನು ತೆಗೆದಿಡಲಿಕ್ಕೆ ಮರೆತೆ. ನೀನು ಊಟಕ್ಕೆ ಹೋದ ಸಮಯದಲ್ಲಿ ನಾನಿದನ್ನು ನನ್ನ ದಾಸಿಯ ಕಡೆಯಿಂದ ತರಿಸಿಕೊಂಡೆನು. ಈಗ ನಿನಗಿದು ಬೇಕಾಗಿದ್ದರೆ, ತಿರುಗಿಕೊಡುವೆನು.

ಶಿಕಂದರನು ತನ್ನ ಎಚ್ಚರಗೇಡಿತನಕ್ಕೆ ನಾಚಿಕೊಂಡನು. ಚಿತ್ರ ವನ್ನು ತಿರುಗಿತೆಗೆದುಕೊಂಡು, ಅವಳನ್ನು ತೀವ್ರವೇ ಹೊರಗೆ ಹಾಕಬೇಕಾ ಗಿತ್ತು. ಅದಕ್ಕಾಗಿ ಅವನು—ಕುಲಸಮು, ನಿನ್ನ ಗಂಡನು ನಿದ್ರಿತನಾಗಿ ದ್ದರೂ, ಅಕಸ್ಮಾತ್ತಾಗಿ ಏಳುವ ಸಂಭವವುಂಟು. ಅವನು ಇಲ್ಲಿಗೆ ಬಂದು ಬಿಟ್ಟರೆ, ನಮ್ಮ ಅವಸ್ಥೆಯು ನೆಟ್ಟಗಾಗುವಂತಿಲ್ಲ. ನಾವಿಬ್ಬರೂ ಪ್ರಾಣಕ್ಕೆ ಸಹ ಎರವಾಗಬಹುದು! ” ಎಂದು ಹೇಳಿದನು.

ಕುಲಸಮು, ಗಹಗಹಿಸಿ ನಗತೊಡಗಿದಳು. ರಮಣಿಯ ಈ ವಿಚಿತ್ರ ವರ್ತನವನ್ನು ನೋಡಿ, ಶಿಕಂದರನು ಮನಸ್ಸಿನಲ್ಲಿ ಯೋಚಿಸಹತ್ತಿದನು— “ ಇವಳೇನು ಪಿಶಾಚಿಯಾಗಿರಬಹುದೇನು? ಮಧ್ಯರಾತ್ರಿಯ ಸಮಯ. ಇಂತಹ ವೇಳೆಯಲ್ಲಿ ಪತಿಯ ಭಯವಿಲ್ಲದೆ ಅಪರಿಚಿತನಾದ ನನ್ನೊಡನೆ ಮನಬಂದಂತೆ ಹರಟೆ ಹೊಡೆಯುತ್ತಿರುವಳು! ಗಹಗಹಿಸಿ ನಗುತ್ತಿರು ವಳು! ! ಸಮಾಜದ ಭಯವೂ ಇವಳಿಗಿದ್ದಂತಿಲ್ಲ. ”

ಶಿಕಂದರನು ಸುಮ್ಮನೆ ಇರುವದನ್ನು ನೋಡಿ, ಆ ರಮಣಿಯು— “ಸೈನಿಕನೇ, ಸೇಖಜಿಯು ಇಲ್ಲಿಗೆ ಬಂದನಾದರೆ, ವ್ಯಭಿಚಾರಿಗಳೆಂದು ನಮ್ಮನ್ನು ತಿರಸ್ಕರಿಸಬಹುದೆಂದು ನೀನು ಭಯಪಡುತ್ತಿರುವೆಯಷ್ಟೇ? ಆದರೆ ಇದಕ್ಕಾಗಿ ನೀನು ಹೆದರಬೇಡ. ನಾನು ಈ ವರೆಗೆ ಪಾಪದಕೆಲಸವ

ಸ್ನಂಪೂ ಮಾಡಿಲ್ಲ. ನನ್ನ ಸದ್ವರ್ತನದ ವಿಷಯವಾಗಿ ಸೇಖಜಿಗೆ ತುಂಬಾ ವಿಶ್ವಾಸವುಂಟು. ಅವನು ನನಗೆ ಸ್ವತಂತ್ರತೆಯನ್ನು ಕೊಟ್ಟುಬಿಟ್ಟಿದ್ದಾನೆ. ನಾನು ಬೇಕಾದಾಗ ಬೇಕಾದಲ್ಲಿ ಹೋಗಲಿ, ಅವನು ಬೇಡೆನ್ನುವದಿಲ್ಲ. ನಾನು ಬಾಲ್ಯ ಕಾಲದಿಂದಲೂ ಹೂಗಳನ್ನೂ, ವಿಸ್ತಾರವಾದ ಆಕಾಶವನ್ನೂ, ನದೀತೀರವನ್ನೂ ಪ್ರೀತಿಸುತ್ತ ಬಂದಿದ್ದೇನೆ. ನನ್ನ ಈ ಪ್ರವೃತ್ತಿಯು ಈಗಲೂ ಕಡಿಮೆಯಾಗಿಲ್ಲ. ಇದಕ್ಕಾಗಿ ನಾನು ಮನಬಂದಂತೆ ಸಂಚರಿಸುತ್ತಿರುವೆನು. ಇದಕ್ಕೆ ಸೇಖಜಿಯ ಪ್ರತಿಬಂಧವಿಲ್ಲ. ಅಂತೆಯೇ ಈ ರಾತ್ರಿಯಲ್ಲಿ ನಿರ್ಭಯದಿಂದ ನಿನ್ನನ್ನು ನೋಡುವದಕ್ಕೆ ಬಂದಿದ್ದೇನೆ. ತರುಣನೇ, ನಿಜವಾಗಿಯೂ ನೀನು ಅತ್ಯಂತ ಸುಂದರನಾಗಿರುವೆ. ಎಂದು ಅಂದಳು.

ಶಿಕಂದರನು ಗೊಂದಲದಲ್ಲಿ ಬಿದ್ದನು. ಅವನು ತುಸು ಹೊತ್ತು ಯೋಚಿಸಿ—"ಸುಂದರೀ, ನಾನು ಪರದೇಶದ ವ್ಯಾಪಾರಸ್ಥನು. ಇಲ್ಲಿ ನಾನು ವ್ಯಭಿಚಾರದ ಕೃತಿಯನ್ನು ಮಾಡತೊಡಗಿದರೆ, ಜನರು ನನ್ನನ್ನು ಹೊಡೆದು ಅಟ್ಟಿಬಿಡುವರು. ನನ್ನ ಅಲಂಕಾರಗಳ ಮಾರಾಟವೆಷ್ಟುಮಟ್ಟಿಗೂ ಆಗದು. ಅದಕ್ಕಾಗಿ ನಾನು ಬಹಳ ಎಚ್ಚರದಿಂದಿರಬೇಕಾಗಿದೆ, ಎಂದುಅಂದನು.

ನಿನ್ನ ರತ್ನಾಲಂಕಾರಗಳು ಹಾಳಾಗಿ ಹೋಗಲಿ! ಇನ್ನು ನನ್ನೊಡನೆ ಕಪಟತನದಿಂದ ವರ್ತಿಸಲು ಯತ್ನಿಸುತ್ತಿರುವೆಯಲ್ಲವೆ? ಎಂಥ ಹುಚ್ಚನು ನೀನು !! ನನ್ನ ಮುಂದೆ ನಿನ್ನ ಆಟವೆಷ್ಟುಮಾತ್ರವೂ ನಡೆಯದೆಂಬುದನ್ನು ಮರೆಯದಿರು. !!

ಶಿಕಂದರನು ಕ್ರೋಧಾತಿಶಯದಿಂದ—ದುಷ್ಟೆ, ಈಗಲೇ ಇಲ್ಲಿಂದ ಹೊರಟುನಡೆ! ಇಲ್ಲವಾದರೆ ನಾನೇ ನಿನ್ನ ಗಂಡನನ್ನು ಎಬ್ಬಿಸುವೆನು! ಎಂದು ಹೇಳಿದನು.

ಕುಲಸಮಳು ನಕ್ಕು—ಪ್ರವಾಸಿಯೆ, ನಿನ್ನ ಬೆದರಿಕೆಗೆ ನಾನು ಹೆದರತಕ್ಕವಳಲ್ಲ! ಸೇಖಜಿಯನ್ನು ಎಬ್ಬಿಸುವೆನೆಂದು ನನ್ನನ್ನು ಹೆದರಿಸುತ್ತಿರುವೆಯಲ್ಲವೇ? ಹೋಗು, ಎಬ್ಬಿಸಿಕೊಂಡು ಬಾ. ಅವನು ನನಗೆ ಮಾಡುವದೇನು? ನಿರ್ದೋಷಿಯಾದ ನಾನು ಯಾರಿಗೂ ಹೆದರುವಂತಿಲ್ಲ. ನಿನ್ನ

ವಸ್ಥೆ ಮಾತ್ರ ನೆಟ್ಟಗಾಗುವ ಸಂಭವವಿಲ್ಲ. ನೀನು ಎಷ್ಟು ಸುಳ್ಳು ಮಾತಾಡುತ್ತಿರುವೆಯಲ್ಲ! ಮೊಗಲಬಾದಶಹನೂ, ಅವನ ದಾಸರೂ, ಧನಲೋಭದಿಂದಲೂ, ರಾಜ್ಯಲೋಭದಿಂದಲೂ ಹೀನ ಕೆಲಸವನ್ನು ಮಾಡಲಿಕ್ಕೆ ಹಿಂಜರಿಯರೆಂಬದು ಇಂದು ನನಗೆ ಗೊತ್ತಾಯಿತು. ನೀನು ಅಕಬರನ ಸೇನಾಪತಿಯು. ನಿನ್ನ ಹೆಸರು ಶಿಕಂದರಖಾ. ನೀನು ನಮ್ಮ ಬಾದಶಹನನ್ನು ಹಿಡಿಯುವದಕ್ಕೆ ಬಂದಿರುವೆ. ಅದಕ್ಕಾಗಿ ಈವ್ಯಾಪಾರಸ್ಥನ ಸೋಗುಹಾಕಿಕೊಂಡು, ಜನರನ್ನು ವಂಚಿಸಲುದ್ಯುಕ್ತನಾಗಿರುವೆ. ನಾನು ನಿಜಸ್ಥಿತಿಯನ್ನು ಬೈಲಿಗೆಳೆದರೆ, ನಿನ್ನ ಅವಸ್ಥೆಯೇನಾಗುವದೆಂಬದು ನಿನಗೆ ಗೊತ್ತುಂಟೇನು? ನಮ್ಮ ಬಾದಶಹನು ನಿನ್ನನ್ನು ಆನೆಯ ಕಾಲಿಗೆ ಕಟ್ಟಿ ಕೊಲ್ಲಿಸುವನು. ಹೀಗೆ ಸತ್ತು ಹೋಗುವದಕ್ಕಿಂತಲೂ, ಜಾಣನಾಗಿ ವರ್ತಿಸುವದು ಒಳಿತಲ್ಲವೇನು? ಎಂದು ಅಂದಳು.

ಶಿಕಂದರನು ಗಾಬರಿಯಾದನು. ಆ ಸಾಹಸಿಯಾದ ಹೆಂಗಸು ಎಂಥ ಕೆಲಸ ಮಾಡುವದಕ್ಕೂ ಹೇಸಳೆಂಬದು ಅವನಿಗೆ ಗೊತ್ತಾಯಿತು. ಅವನು ಬಹುಕಾಲ ಯೋಚಿಸಿ, ಧೈರ್ಯತಂದುಕೊಂಡು—ಪಾಪಿಷ್ಟಳೇ, ನಿನ್ನ ಹೆದರಿಕೆಗೆ ನಾನು ಹೆದರುವದಿಲ್ಲ! ನಿನ್ನೊಡನೆ ಅನುಕೂಲತೆಯಿಂದ ವರ್ತಿಸುವದು ನನಗೆ ಬೇಕಾಗಿಲ್ಲ!! ಕೂಡಲೇ ಇಲ್ಲಿಂದ ಹೋಗಿಬಿಡು!!! ಎಂದು ಅಂದನು.

ಕುಲಸಮುಳು ಸಿಟ್ಟಿಗೇಳಲಿಲ್ಲ. ಶಿಕಂದರನ ಮಾತು ಕೇಳಿ ನಕ್ಕುಬಿಟ್ಟಳು. ಶಿಕಂದರನು ಮರ್ಮಾಹತನಾಗಿ-ಕುಲಸಮು, ನಿನ್ನ ಉದ್ದೇಶವಾದರೂ ಯಾವದು? ಎಂದು ಕೇಳಿದನು.

ಕುಲಸಮುಳು ಗಂಭೀರ ಮುಖಿಯಾಗಿ—ಮೂರ್ಖಾ, ನಾನು ವ್ಯಭಿಚಾರಿಣಿಯಲ್ಲ! ಮೋಹಿತಳಾಗಿ ನಿನ್ನ ಮನವೊಲಿಸುವದಕ್ಕೆ ಇಲ್ಲಿಗೆ ಬಂದವಳಲ್ಲ! ನಾನು ವ್ಯಭಿಚಾರಕ್ಕೆ ಎಂದೂ ಮನಸ್ಸು ಮಾಡಿದವಳಲ್ಲ! ಒಂದುವೇಳೆ ಜಾರಿಣಿಯಾಗುವ ಇಚ್ಛೆಯು ನನಗಿದ್ದರೆ, ನಾನು ಈ ರಾಜ್ಯದ ಮಹಾರಾಣಿಯಾಗುತ್ತಿದ್ದೆನು!! ನಾನು ನಿನ್ನ ಪರೀಕ್ಷೆಗಾಗಿ ಈ ವರೆಗೆ ಹಾಗೆ ಮಾತಾಡಿದೆನಲ್ಲದೆ ಬೇರಿಲ್ಲ. ನಾನು ಒಂದು ಕೆಲಸವನ್ನು ಮಾಡ

ಬೇಕಾಗಿದೆ. ಆದರೆ ಅಬಲೆಯಾದ ನನ್ನಿಂದ ಆ ಕೆಲಸವಾಗುವಂತಿಲ್ಲ. ಕಾರಣ ನಿನ್ನ ಸಹಾಯವು ಬೇಕಾಗಿದೆ. ಅದಕ್ಕಾಗಿಯೇ ಈ ರಾತ್ರಿಯಲ್ಲಿ ನಿನ್ನಬಳಿಗೆ ಬರುವ ಸಾಹಸವನ್ನು ಮಾಡಿದೆನು, ಎಂದು ಹೇಳಿದಳು.

ನಾನು ನಿನಗೆ ಯಾವ ಕೆಲಸದಲ್ಲಿಯೂ ಸಹಾಯ ಮಾಡಲಾರೆನು, ಎಂದು ಶಿಕಂವರನು ನಿರ್ಧಾರದಿಂದ ಹೇಳಿದನು.

ಹಾಗಾದರೆ ನಾನು ನಿನ್ನನ್ನು ಕೊಲ್ಲಿಸದಿರೆನು! ಪಠಾಣರು ಎಂಥಹ ಕ್ರೂರರಾಗಿರುವರೆಂಬವರ ಅನುಭವವು ತೀವ್ರವೇ ನಿನಗಾಗುವದು. ಇಗೋ, ನೋಡು. ಈ ಕಾಗದವು ಯಾರದೆಂಬದು ನಿನಗೆ ಗೊತ್ತಿದೆಯೇ? ಎಂದು ಅಂದು, ಕುಲಸಮಳು ತನ್ನ ಬಳಿಯಲ್ಲಿರುವ ಕಾಗದವನ್ನು ಅವನಿಗೆ ತೋರಿಸಿದಳು. ಚಂದ್ರನ ಪ್ರಕಾಶವಲ್ಲ ಅದು ಶಿಕಂದರನಿಗೆ ಕಾಣಿಸಿತು. ಅದು ಬಾದಶಹನು ಈದಲಗಡದ ಮೇಲೆ ದಂಡೆತ್ತಿ ಹೋಗುವದಕ್ಕಾಗಿ ತನಗೆಕೊಟ್ಟ ಪರವಾನಗಿ-ಪತ್ರವಾಗಿತ್ತು. ಶಿಕಂದರನು ಅವಳ ಮಾತಿಗೆ ಒಪ್ಪಿಕೊಳ್ಳಲೇಬೇಕಾಯಿತು. ಅವನು—ಈ ಕಾಗದವು ನಿನಗೆಲ್ಲಿ ಸಿಕ್ಕಿತು? ಎಂದು ಅವಳನ್ನು ಕೇಳಿದನು.

ಇದು ಕೋಣೆಯಲ್ಲಿ ಬಿದ್ದಿತ್ತಂತೆ. ಚಿತ್ರವನ್ನು ತಂದುಕೊಟ್ಟ ದಾಸಿಯು ಈ ಕಾಗದವನ್ನು ತಂದುಕೊಟ್ಟಳು.

ಈ ಕಾಗದದ ಸಹಾಯದಿಂದ ನೀನು ನನಗೇನು ಮಾಡಬಲ್ಲಿ?

ಇದನ್ನು ಮಾರಿ ಹಣವನ್ನು ಸಂಪಾದಿಸುವೆನು.

ಮಾರಲಿಕ್ಕೆ ತೆಗೆದುಕೊಳ್ಳುವರಾರು?

ಅಕಬರಶಹನು ತೆಗೆದುಕೊಳ್ಳಬಹುದು. ಇಲ್ಲವೆ ಸೋಹನಿಯು ತಕ್ಕೊಳ್ಳಬಹುದು. ನಾನು ನಿನಗೆ ಒಂದು ಸಾವಿರ ಅಸರಫಿಗಳನ್ನು ಕೊಡುವೆನು. ಇದನ್ನು ನನಗೆ ಕೊಟ್ಟುಬಿಡು.

ನಿನ್ನಿಂದ ನನಗೆ ಹಣವು ಬೇಕಾಗಿಲ್ಲ. ನೀನು ನನ್ನ ಕೆಲಸಕ್ಕೆ ಸಹಾಯಮಾಡಲೊಪ್ಪಿದರೆ, ಹಣವಿಲ್ಲದೆ, ಇದನ್ನು ನಿನಗೆ ಕೊಟ್ಟು ಬಿಡುವೆನು.

ನಾನೇನು ಮಾಡಲಿ ಹೇಳು.

ನಾನು ಹೇಳಿದ ಕೆಲಸವನ್ನು ಮಾಡುತ್ತೇನೆಂದು ವಚನ ಕೊಡು.

ಯಾವಕೆಲಸವೆಂಬದನ್ನು ಕೇಳದ ಹೊರತು ವಚನಕೊಡಲಾರೆನು.

ಹಾಗಾದರೆ ಹೇಳುತ್ತೇನೆ ಕೇಳು. ನೀನು ಸೋಹಾನಿಯನ್ನು ಹಿಡಿದುಕೊಂಡು ಹೋಗುವದಕ್ಕೆ ಬಂದಿರುವೆಯಷ್ಟೇ? ಆ ಸೋಹಾನಿಯು ನನ್ನ ಶತ್ರುವು. ನಾನು ಬಡವಿಯು. ಅವನು ಅರಸನು. ದ್ರವ್ಯಮದದಿಂದ ಉನ್ಮತ್ತನಾದ ಅವನು ನನ್ನ ಅಪಮಾನ ಮಾಡಿದ್ದಾನೆ. ನಾನು ಆ ಅಪಮಾನದ ಸೇಡು ತೀರಿಸಿಕೊಳ್ಳಬೇಕಾಗಿದೆ.

ಶಿಕಂದರನು ಸಂದೇಹಾಕುಲಚಿತ್ತನಾಗಿ ಅವಳ ಮೋರೆಯನ್ನು ನೋಡತೊಡಗಿದನು. ಕುಲಸಮುಳು ಇದನ್ನು ತಿಳಿದು— “ ಶಿಖಂದರಖಾ, ನೀನು ನನ್ನ ಅಣ್ಣನು; ನಾನು ನಿನ್ನ ತಂಗಿಯು. ಸೋಹಾನಿಯು ನನ್ನ ಅಪಮಾನ ಮಾಡಿದ್ದಲ್ಲದೆ, ಅವನ ಹೆಂಡತಿಯೂ ಗರ್ವದಿಂದ ನನ್ನನ್ನು ಹೀಯಾಳಿಸುತ್ತಿರುವಳು. ಸೋಹಾನಿಯ ಹೆಂಡತಿಗೆ ನನ್ನಂತಹ ದಾಸಿಯು ಬೇಕಾಗಿರುವಳಂತೆ. ಅವಳು ನನ್ನನ್ನು ದಾಸಿಯನ್ನಾಗಿ ಮಾಡಿಕೊಳ್ಳುವಳಂತೆ! ನಾನು ಅವಳ ಸೊಕ್ಕನ್ನು ನಾಶಮಾಡದೆ ಬಿಡೆನು. ಸೇಖಜಿಯ ಮುಂದೆ ನಾನು ಈ ಮಾತನ್ನು ಹೇಳಿಲ್ಲ; ಯಾಕಂದರೆ, ಅವನಿಂದ ಈ ಕೆಲಸವಾಗುವಂತಿಲ್ಲ. ನಿನ್ನಿಂದ ನನ್ನ ಕೆಲಸವಾಗುವದೆಂಬ ಮನವರಿಕೆಯು ನನಗಿದೆ. ತಂಗಿಯ ಮರ್ಯಾದೆಯನ್ನು ಕಾಯುವದು ನಿನ್ನ ಕರ್ತವ್ಯವಲ್ಲವೇ? ಎಂದು ಅಂದಳು.

ಶಿಕಂದರನು ಆನಂದಭರದಿಂದ ತಂಗೀ, ನಾನು ನಿನಗೆ ತುಂಬಾ ಸಹಾಯಮಾಡುವೆನು, ಎಂದು ಹೇಳಿದನು. ಕುಲಸಮುಳು ಚಿತ್ರವನ್ನೂ, ಪರವಾನಿಗೆಯ ಪತ್ರವನ್ನೂ ಶಿಕಂದರನಿಗೆ ಕೊಟ್ಟು—ಈ ಚಿತ್ರವು ಆ ಗರ್ವಿಷ್ಠೆಯದು. ನೀನು ಅವಳನ್ನು ಅಂತಃಪುರದ ದಾಸಿಯ ದಾಸಿಯನ್ನಾಗಮಾಡಿದರೆ, ನನ್ನ ಮಾನವನ್ನು ಕಾಯ್ದಂತಾಯಿತು, ಎಂದು ಹೇಳಿದಳು.

ಚಿತ್ರಾಂಕಿತರಮಣಿಯು ಸೋಹಾನಿಯ ಹೆಂಡತಿಯೆಂಬದನ್ನು

ತಿಳಿದು, ಶಿಕಂದರನಿಗೆ ಆನಂದವಾಯಿತು. ಗುಲಸಾನೆಯನ್ನು ಕೈವಶಮಾಡಿಕೊಳ್ಳುವದಕ್ಕೆ ಕುಲಸಮುಳಂಥ ಚತುರ ಹೆಂಗಸಿನ ಸಹಾಯವು ದೊರೆತುದನ್ನು ನೋಡಿ, ತಾನಿನ್ನು ಜಯಶಾಲಿಯಾಗುವೆನೆಂದು ಅವನು ಭಾವಿಸಿದನು. ಅವನು ಕುಲಸಮುಳಿಂದ ಕೆಲವು ಸಂಗತಿಗಳನ್ನು ತಿಳಕೊಳ್ಳಬೇಕಾಗಿತ್ತು. ಅವನು ಮುಖವೆತ್ತಿ ನೋಡಿದನು. ಕುಲಸಮುಳು ಮಾಯವಾಗಿ ಹೋಗಿಬಿಟ್ಟಿದ್ದಳು. ಅವಳು ಯಾವ ಹಾದಿಯಿಂದ ಬಂದಿರಬಹುದು? ಯಾವ ಮಾರ್ಗವಾಗಿ ಹೋಗಿರಬಹುದು? ಎಂಬದು ಶಿಕಂದರನಿಗೆ ತಿಳಿಯಲಿಲ್ಲ. ಅವನು “ಕುಲಸಮು—ಕುಲಸಮು” ಎಂದು ಕೂಗಿದನು. ಯಾರೂ ಉತ್ತರಕೊಡಲಿಲ್ಲ. ಶಿಕಂದರನು ವಿಸ್ಮಯಾತಿರೇಕದಿಂದ ವಿಚಾರಮಾಡುತ್ತ ಕುಳಿತುಕೊಂಡನು.

## ಐದನೆಯ-ಪರಿಚ್ಛೇದ.



ಶಿಕಂದರನು ಕುಳಿತಿದ್ದ ಕೋಣೆಯ ಒಂದು ಗುಪ್ತಬಾಗಿಲವು ತೆರೆಯಲ್ಪಟ್ಟಿತ್ತು. ಶಿಕಂದರನು ಮುಖವೆತ್ತಿ ನೋಡಿದನು. ಕುಲಸಮುಳ ಗಂಡನಾದ ಸೇಖಜಿಯು ಅವನೆದುರಿಗೆ ಬಂದು ನಿಂತುಕೊಂಡು — “ಸಾಹೇಬ, ರಾತ್ರಿಯು ಬಹಳವಾಗಿದೆ. ಇನ್ನೂ ಮಲಗಿಲ್ಲವೇಕೆ? ಕುಲಸಮುಳನ್ನು ಕೂಗುತ್ತಿದ್ದಿರೇಕೆ? ಅವಳು ನನ್ನ ಧರ್ಮಪತ್ನಿಯು. ನಾನು ಇರುವದಕ್ಕೆ ಸ್ಥಳಕೊಟ್ಟು, ಉಪಕಾರಮಾಡಿದ್ದಕ್ಕೆ ನೀವು ಈ ರೀತಿ ಪ್ರತ್ಯುಪಕಾರವನ್ನು ಮಾಡಲಿಕ್ಕೆ ಸಿದ್ಧರಾಗಿರುವಿರೇನು?” ಎಂದು ಕೇಳಿದನು.

ಶಿಕಂದರನು ಸೇಖಜಿಗೆ ಉತ್ತರಕೊಡಲಿಲ್ಲ. ಮನಸ್ಸಿನಲ್ಲಿಯೇ ಅಂದುಕೊಂಡನು— “ಈ ವ್ಯಾಪಾರದಲ್ಲಿ ನಾನು ಸಂಪೂರ್ಣವಾಗಿ ನಿರ್ದೋಷಿ

ಯಾಗಿದ್ದೇನೆ, ಕುಲಸಮುಳು ತಾನಾಗಿಯೇ ನನ್ನ ಬಳಿಗೆ ಬಂದಳು; ನಿರ್ಲಜ್ಜತನದಿಂದ ಮನಸ್ಸಿಗೆ ಬಂದಹಾಗೆ ಮಾತಾಡಿದಳು. ಈ ಸೇಖಜಿಯು ಅವಳಿಗಿಂತಲೂ ನಾಚಿಕೆಗೇಡಿಯಾಗಿರುವನೆಂಬಂತೆ ತೋರುತ್ತದೆ; ಯಾಕಂದರೆ, ಇವನು ಅಪರಾಧಿನಿಯಾದ ತನ್ನ ಹೆಂಡತಿಯನ್ನು ಶಿಕ್ಷಿಸದೆ, ನನ್ನನ್ನು ನಿಂದಿಸಲಿಕ್ಕೆ ಬಂದಿದ್ದಾನೆ! ”

ಶಿಕಂದರನು ಮಾತಾಡದಿರುವದನ್ನು ನೋಡಿ, ಸೇಖಜಿಯು ಹೇಳ ತೊಡಗಿದನು--“ಸಾಹೇಬ, ನೀವು ನನ್ನನ್ನು ನಿಂದಿಸಬಹುದು. ಕುಲಸ ಮುಳನ್ನು ದಂಡಿಸದೆ, ನನ್ನನ್ನೇಕೆ ಶಿಕ್ಷಿಸಲಿಕ್ಕೆ ಬಂದೆಯೆಂದು ಕೇಳಬಹುದು. ನಾನು ಕುಲಸಮುಳನ್ನು ಶಿಕ್ಷಿಸಲಿಕ್ಕೆ ಅಸಮರ್ಥನಾಗಿದ್ದೇನೆಂಬವನ್ನು ನಿಮಗೆ ಮೊದಲೇ ಹೇಳುವೆನು. ಅವಳು ನನ್ನ ಮೂರನೆಯ ಧರ್ಮ ಪತ್ನಿಯು. ನಾನು ಮುದುಕನು. ಅವಳು ತರುಣಿಯು. ಅವಳು ವಿಲಾಸೋ ಪಭೋಗಕ್ಕೆ ಹಪಾಪಿಸಿದವಳು. ಆಕಡೆಗೆ ಲಾಲಸೆಯಿದ್ದರೂ, ಉಪಭೋಗ ತೆಗೆದುಕೊಳ್ಳಲು ಅಸಮರ್ಥನು ನಾನು! ಈಸ್ಥಿತಿಯಲ್ಲಿ ನಾನು ಅವಳ ಮೇಲೆ ಅಧಿಕಾರ ನಡಿಸಿದರೆ, ಅದರಿಂದ ವಿಪರೀತ ಪರಿಣಾಮವಾಗುವ ಸಂಭವವುಂಟು. ಕಾರಣ ನಾನು ಮನಸ್ಸನ್ನು ಬಿಗಿಹಿಡಿಯಬೇಕಾಗಿದೆ, ಸಿಟ್ಟನ್ನು ನುಂಗಿಕೊಳ್ಳಬೇಕಾಗಿದೆ, ಅವಳಿಗೆ ಸ್ವಾತಂತ್ರ್ಯವನ್ನು ಕೊಟ್ಟಿರುವದಕ್ಕೆ ಇನ್ನೊಂದು ಕಾರಣವುಂಟು—ಅವಳು ಸ್ವೇಚ್ಛಾಚಾ ರಿಣಿಯಾಗಿದ್ದರೂ, ವ್ಯಭಿಚಾರಿಣಿಯಲ್ಲ. ದೂರದಿಂದ ನೋಡುವವರಿಗೆ, ಅವಳು ವಿಲಕ್ಷಣ ಹೆಂಗಸಾಗಿರುವಂತೆ ಕಾಣುತ್ತಿರುವಳು. ಅರಿಯದವ ರಿಗೆ ಅವಳ ಚರಿತ್ರೆಯ ರಹಸ್ಯವೇ ತಿಳಿಯದು. ಅರಿಯದವರ ಮಾತೊ ತ್ತಟ್ಟಿಗಿರಲಿ, ಪ್ರತ್ಯಕ್ಷ ಗಂಡನಾದ ನನಗೂ ಅವಳ ಆಚರಣೆಯ ಇಂಗಿ ತವು ತಿಳಿಯದಾಗಿದೆ. ಒಮ್ಮೊಮ್ಮೆ ಪರಪುರುಷರೊಡನೆ ಸಿಕ್ಕಂತೆ ಹರಟುವಳು. ನಗೆಯಾಡುವಳು. ಅವರ ಏಕಾಂತವಾಸಕ್ಕೆ ಬುದ್ಧಿ ಪೂ ರ್ವಕವಾಗಿ ಹೋಗುವಳು. ಇದನ್ನು ನೋಡಿದ ನನಗೆ ಅವಳ ವಿಷಯ ದಲ್ಲಿ ಸಂದೇಹವುಂಟಾಗುವದು. ಬೇರೊಂದು ವೇಳೆಯಲ್ಲಿ ಅವಳು ಮಹಾರಾ ಣಿಯ ಪದವನ್ನು ಉಪೇಕ್ಷಿಸಿ ಬಡವನಾದ ನನ್ನನ್ನನುಸರಿಸಿರುವದಕ್ಕೆ

ಮುಂದುವರಿಯುವಳು. ಅವಳ ಈ ತರದ ವರ್ತನವನ್ನು ನಾನು ಅನೇಕ ಸಾರೆ ನೋಡಿದ್ದೇನೆ. ಈ ಪ್ರಸಂಗಗಳಲ್ಲಿ ನನಗೆ ಅವಳ ವಿಷಯದಲ್ಲಿ ತುಂಬಾ ಅಭಿಮಾನವುಂಟಾಗುವದು. ಅವಳಲ್ಲಿ ಕಪಟತನವಿಲ್ಲ. ನನ್ನೊಡನೆ ಮನಬಿಚ್ಚಿ ಮಾತಾಡುವಳು. ನಡೆದಯಾವತ್ತುಸಂಗತಿಗಳನ್ನು ಹೇಳುವಳು. ತನ್ನಿಂದ ಏನಾದರೂ ಅಪರಾಧವಾಗಿದ್ದರೆ, ಅದಕ್ಕಾಗಿ ನನ್ನ ಕ್ಷಮೆಬೇಡುವಳು. ಈ ಕಾರಣಗಳಿಂದ ನಾನು ಅವಳಿಗೆ ಸಂಪೂರ್ಣವಾಗಿ ಸ್ವತಂತ್ರತೆಯನ್ನು ಕೊಟ್ಟುಬಿಟ್ಟಿದ್ದೇನೆ.

ಶಿಕಂದರನು ಮನಸ್ಸಿನಲ್ಲಿಯೇ ಅಂದುಕೊಂಡನು— "ಸೇಖಜಿಯು ಕುಲಸಮುಳ ಗಂಡನಾಗಿದ್ದರೂ ಅವಳ ವಿಚಿತ್ರ ಚರಿತ್ರೆಯ ರಹಸ್ಯವನ್ನರಿಯನು. ಇವನು ಅವಳ ವಿಷಯದಲ್ಲಿ ವಿಶ್ವಾಸವಿಟ್ಟಿರುವನು; ಸಂದೇಹವನ್ನು ತೆಗೆದುಕೊಳ್ಳುತ್ತಿರುವನು. ಇಂತಹ ಹೊಯ್ದಾಟದ ಸ್ವಭಾವವುಳ್ಳ ಜನರನ್ನು ನಾನಿಮುವರೆಗೆ ನೋಡಿದ್ದಿಲ್ಲ! ಮುಖ್ಯವಾಗಿ ಇವರಿಬ್ಬರೂ ವಿಚಿತ್ರ ಮನುಷ್ಯರಾಗಿದ್ದಾರೆ!!"

ಸೇಖಜಿಯು ಮತ್ತೆ ಹೇಳತೊಡಗಿದನು—"ಮನುಷ್ಯನು ವಿಕಾರವಶನಾಗಿ ಎಲ್ಲವನ್ನೂ ಮರೆತುಬಿಡುವನು, ಅಂತೆಯೇ ನಾನೂ ಕುಲಸಮುಳ ರೂಪಕ್ಕೆ ಮೋಹಿತನಾಗಿ, ಅವಳ ಎಲ್ಲ ದುಷ್ಕರ್ಮಗಳನ್ನು ಮರೆಯುತ್ತಿರುವೆನು. ಆದರೆ ದೈವವು ನನಗೆ ಪ್ರತಿಕೂಲವಾಗಿದೆ. ಅವಳ ಯಾವತ್ತು ಕೆಲಸವನ್ನು ನನ್ನಿಂದ ಮರೆಯುವದಕ್ಕಾಗಲೊಲ್ಲದು. ಅವಳ ಪ್ರತಿಯೊಂದು ಕೆಲಸವು ನನ್ನ ಕಣ್ಣಿಗೆಬಿದ್ದು, ನನಗೆ ಸಿಟ್ಟುಬರುವಂತೆ ಮಾಡುತ್ತದೆ. ಇಂಥ ದುಷ್ಟ ಹಣೆಬರಹವನ್ನು ನಾನು ಈಸಾರೆ ಗೆಲ್ಲುವದನ್ನು ನಿರ್ಧರಿಸಿಕೊಂಡಿದ್ದೇನೆ."

ಶಿಕಂದರನಿಗೆ ನಗೆಯು ಬಂತು. ಅವನು—ಸೇಖಜಿ, ಈ ಕೆಲಸವು ನಿನ್ನಿಂದಾಗದು. ಮಹಾಪರಾಕ್ರಮಿಯಾದ ಸಾಮ್ರಾಟನಿಗೆ ಸಾಧ್ಯವಾಗದ, ಮಹಾಜ್ಞಾನಿಗಳಾದ ಸಾಧುಗಳಿಗೆ ಅಸಾಧ್ಯವಾದ ದೈವವಿಜಯವು ನನ್ನ— ನಿನ್ನಂಥಾ ಸಾಮಾನ್ಯರಿಗೆ ಸಾಧ್ಯವಾಗುವದು ಹೇಗೆ?" ಎಂದು ಅಂದನು.

ಸಾಹೇಬ, ನೀವು ಏನೇ ಹೇಳಲೊಲ್ಲರೇಕೆ! ನಾನು ದೈವವನ್ನು ಗೆದ್ದೇ

ತೀರುವೆನು! ನನ್ನ ದೈವವು ಸುಖವನ್ನು ಬಯಿಸುತ್ತಿರುವದು. ಈ ಮುಪ್ಪಿನ ವಯಸ್ಸಿನಲ್ಲಿ ಹೆಂಡತಿಯೊಡನೆ ಸುಖದಿಂದ ಸಂಸಾರ ನಡೆಯಿಸಬೇಕೆನ್ನುತ್ತಿರುವದು. ನಾನು ಅದಕ್ಕೆ ಈಸುಖವು ದೊರೆಯದಂತೆ ಮಾಡಿಬಿಡುವೆನು."

ಶಿಕಂದರನು ಮನಸ್ಸಿನಲ್ಲಿ—ಇವನು ಕುಲಸಮಳಿಗೆ ತಕ್ಕ ಗಂಡನಾಗಿರುವನು. ಅವಳಂತೆ ಇವನೂ ವಿಚಿತ್ರಪ್ರಾಣಿಯು. ಇವನು ಇಚ್ಛಾಪೂರ್ವಕವಾಗಿ ತನಗೆ ತಾನೇ ದುಃಖವನ್ನು ತಂದುಕೊಳ್ಳಬೇಕೆನ್ನುತ್ತಾನೆ! ಇಂತಹ ಹುಚ್ಚವ್ಯಕ್ತಿಯನ್ನು ನಾನಿದುವರೆಗೆ ನೋಡಿದ್ದಿಲ್ಲ! ಎಂದು ಅಂದುಕೊಂಡು ಸೇಖಜಿಯನ್ನು ಕುರಿತು—ಯಾವ ಉಪಾಯದಿಂದ ನೀನು ದೈವವನ್ನು ಗೆಲ್ಲಲಿಚ್ಛಿಸುತ್ತಿರುವೆ? ಎಂದು ಕೇಳಿದನು.

ನಾನು ಕುಲಸಮಳ ರಕ್ತವನ್ನು ಹೀರಿಬಿಡುವೆನು!

ಶಿಕಂದರನು ಭಯದಿಂದ—" ಸೇಖಜಿ, ಸ್ತ್ರೀಹತ್ಯೆಯು ಮಹಾಪಾತಕವು. ನೀನು ಇಂಥ ಪಾಪವನ್ನು ಕಟ್ಟಿಕೊಳ್ಳುವೆಯಾ? " ಎಂದು ಕೇಳಿದನು.

ಸೇಖಜಿಯು ನಿರಾಶಾಪೂರ್ಣ ನಗುವಿನಿಂದ—" ಸಾಹೇಬ, ಏನು ಮಾಡಲಿ? ದೇವರ ಇಚ್ಛೆಯೇ ಹೀಗಿರುವಂತೆ ತೋರುತ್ತದೆ. ಅವನ ಇಚ್ಛೆಯನ್ನು ಮೀರುವದು ಹೇಗೆ? ನಾನು ಕುಲಸಮಳನ್ನು ಕೊಲ್ಲಬೇಕೆಂದು ನಿರ್ಧರಿಸಿಕೊಂಡಿದ್ದೇನೆ. ಏನೇ ಆಗಲಿ, ನಾನು ನನ್ನ ಈ ನಿರ್ಧಾರದಿಂದ ಹಿಂಜೆಗೆಯೆನು; ಆದರೆ ಸ್ವತಃ ನಾನೇ ಕುಲಸಮಳನ್ನು ಕೊಲ್ಲಲಾರದವನಾಗಿರುವೆನು. ಮುದುಕನಾಗಿಹೋಗಿದ್ದೇನೆ. ಕೈಯಲ್ಲಿ ಶಸ್ತ್ರಹಿಡಿಯುವ ಸಾಮರ್ಥ್ಯವಿಲ್ಲ. ಈ ಪ್ರಸಂಗನಲ್ಲಿ ನನಗೆ ನಿಮ್ಮ ಸಹಾಯವು ಬೇಕಾಗಿದೆ. ನೀವು ನಿಮ್ಮ ಆ ಹದನವಾದ ಖಡ್ಗದಿಂದ ಅವಳ ರುಂಡವನ್ನು ಹಾರಿಸಿಬಿಡಿರಿ. ಅಂದರೆ ನನಗೆ ಸಮಾಧಾನವಾಗುವದು. ನಿಮ್ಮ ಉಪಕಾರವನ್ನು ನಾನೆಂದಿಗೂ ಮರೆಯುವದಿಲ್ಲ. ಎಂದು ಅಂದನು.

"ಸೇಖಜೀ, ನಾನು ಈ ಕೆಲಸವನ್ನು ಮಾಡಲಾರೆನು."

"ಸಾಹೇಬ, ಹೀಗೆ ಅನ್ನಬೇಡರಿ. ಹಟಕ್ಕೆ ಬಿದ್ದು ನಾನು ಶಸ್ತ್ರಧಾರಿಯಾದರೂ, ನನ್ನಿಂದ ಕುಲಸಮಳನ್ನು ಕೊಲ್ಲುವದಾಗದು;

ಅವಳ ಸುಂದರವಾದ ಮುಖವನ್ನು ನೋಡಿದೊಡನೆಯೇ ಎಲ್ಲವೂ ಮರೆತು ಹೋಗುವದು. ಶಸ್ತ್ರವು ಕೆಳಗೆ ಬೀಳುವದು. ಅದಕ್ಕಾಗಿಯೇ ನಿಮಗೆ ಈ ರೀತಿಯಿಂದ ಹೇಳಿಕೊಳ್ಳುತ್ತೇನೆ. ನಾನು ನಿಮ್ಮ ಸೇವಕನು."

ಶಿಕಂದರನು ಇದುವರೆಗೆ ಇಂತಹ ಅದ್ಭುತರಹಸ್ಯದ ಪ್ರಾಣಿಯನ್ನು ನೋಡಿರಲಿಲ್ಲ. ಅವನು ಬಹಳ ಗೊಂದಲದಲ್ಲಿ ಬಿದ್ದು ತುಸು ಹೊತ್ತು ಯೋಚಿಸಿದನು. ತರುವಾಯ ಸೇಖಜಿಯನ್ನು ಕುರಿತು— "ಕುಲಸಮುಳನ್ನು ಕೊಲ್ಲುವದಕ್ಕೆ ಈ ಮೇರೆಗೆ ಹಟವನ್ನೇ ತೊಟ್ಟಿದುವೆ? ಅವಳು ಮಾಡಿದ ಅಂಥ ಅಪರಾಧವಾದರೂ ಯಾವದು?" ಎಂದು ಕೇಳಿದನು.

"ಅವಳು ಏನು ಮಾಡಿದಳು, ಏನುಮಾಡತಕ್ಕವಳಿದ್ದಾಳೆ ಎಂಬದನ್ನು ಹೇಳುತ್ತಾ ಕುಳಿತುಕೊಳ್ಳಲಾರೆ. ಅವಳು ಅತ್ಯಂತ ದುಷ್ಟೆಯು! ಮಹಾಪಾಪಿಷ್ಠಳು! ಅವಳು ಜೀವದಿಂದಿರುವವರೆಗೆ ನನಗೆ ಸುಖವು ದೊರೆಯುವಂತಿಲ್ಲ!!"

"ಸೇಖಜಿ, ನಿನ್ನ ಗ್ರಹಿಕೆಯು ತಪ್ಪಾದದ್ದು. ನೀನು ಭ್ರಾಂತಿವಶನಾಗಿ ವ್ಯರ್ಥವಾಗಿ ಕುಲಸಮುಳಮೇಲೆ ದೋಷಾರೋಪವನ್ನು ಮಾಡುತ್ತಿರುವೆ. ಅವಳು ವ್ಯಭಿಚಾರಿಣಿಯಲ್ಲವೆಂದು ನಾನು ನಿರ್ಧಾರದಿಂದ ಹೇಳುತ್ತೇನೆ. ನನ್ನ ಮಾತಿನ ಮೇಲೆ ವಿಶ್ವಾಸವಿಟ್ಟು ಶಾಂತನಾಗು.

ಸಾಹೇಬ, ಒಮ್ಮೊಮ್ಮೆ ನನ್ನ ಮನಸ್ಸಿನಲ್ಲಿಯೂ ಈ ವಿಚಾರವು ಬರುತ್ತಿರುವದು. ಕುಲಸಮುಳು ವ್ಯಭಿಚಾರಿಣಿಯಾಗಿ ಹೋಗಿದ್ದಾಳೆಂದು ನಾನು ನಿಶ್ಚಯಾತ್ಮಕವಾಗಿ ಹೇಳಲಿಕ್ಕೆ ಬರುವಂತಿಲ್ಲ. ಆದರೂ ಅವಳನ್ನು ಸಂಹರಿಸದಿರುವದು ಯೋಗ್ಯವಲ್ಲ; ಯಾಕಂದರೆ, ಈಗಅವಳು ವ್ಯಭಿಚಾರಿಣಿಯಾಗಿರದಿದ್ದರೂ, ತುಸು ದಿವಸಗಳಲ್ಲಿ ನಿಶ್ಚಯವಾಗಿಯೂ ಆಗುವಳು. ಅದನ್ನು ನಾನು ನೋಡಲಾರೆನು!"

"ಸೇಖಜಿ, ಮುಂದಾಗುವದನ್ನು ನೀನು ಹೇಗೆ ತಿಳಿಯಬಲ್ಲೆ;

ನೀನು ಭ್ರಾಂತಿಗೊಳಗಾಗಿ ಈ ಪ್ರಕಾರ ಮಾತಾಡುತ್ತಿರುವೆಯಲ್ಲದೆ ಬೇರಿಲ್ಲ. ಕುಲಸಮಳು ಮುಂದೆ ವ್ಯಭಿಚಾರಿಣಿಯಾಗುವಳೆಂಬದಕ್ಕೆ ಕಾರಣವೇನೆಂಬದನ್ನು ಹೇಳಬಲ್ಲೆಯಾ;"

ಸ್ವತಃ ಬಾದಶಹನು ಕುಲಸಮಳ ಪ್ರೇಮಕಾಂಕ್ಷಿಯು! ಅಂದ ಬಳಿಕ ಕುಲಸಮಳ ಪಾತಿವ್ರತ್ಯವು ಬಹುಕಾಲವಿರ್ಪುತೆಂದು ಹೇಗೆ ಹೇಳಬೇಕು!"

ಬಾದಶಹನು ಕುಲಸಮಳ ಪ್ರೇಮಮುಗ್ಧನೆಂಬದನ್ನು ನೀನು ಹೇಗೆ ತಿಳಿದೆ!"

"ಸಾಹೇಬ, ನಾನು ಈ ಸಂಗತಿಗಳನ್ನು ಮನವರಿಕೆಮಾಡಿಕೊಂಡಿದ್ದೇನೆ. ಈ ವಿಷಯವಾಗಿ ಇನ್ನು ಹೆಚ್ಚಿಗೆ ಮಾತಾಡುವ ಇಚ್ಛೆಯು ನನಗಿಲ್ಲ. ನೀವು ಕುಲಸಮಳನ್ನು ಕೊಲ್ಲುವದಕ್ಕೆ ನನಗೆ ಸಹಾಯ ಮಾಡಲಿಕ್ಕೇಬೇಕು."

ನಾನು ನಿನಗೆ ಸಹಾಯಮಾಡದಿದ್ದರೆ?

"ಬಾದಶಹನಿಗೆ ತಿಳಿಸಿ, ನಿಮ್ಮನ್ನು ಬಂದಿಗಳನ್ನಾಗಿ ಮಾಡಿಸುವೆನು. ನೀವು ರತ್ನವ್ಯಾಪಾರಿಗಳಾದ ವರ್ತಕರಲ್ಲ. ಅಕಬರಶಹನ ಸೇನಾಪತಿಗಳು; ನಿಮ್ಮ ಹೆಸರು ಶಿಕಂದರಖಾ. ನೀವು ಸೋಹಾಸಿಯನ್ನು ಹಿಡಿಯುವದಕ್ಕೆ ಬಂದಿರುವಿರಿ."

ಶಿಕಂದರನು ತನ್ನ ಖಡ್ಗವನ್ನು ಒರೆಯಿಂದ ಹಿರಿದು—"ಸೇಖಜೀ ಈ ಕೋಣೆಯಲ್ಲಿ ಬೇರೆ ಯಾರೂ ಇಲ್ಲ. ನಾನು ನಿನ್ನನ್ನು ಕೊಂದುಬಿಡುವೆನು. ಇದರಿಂದ ನಾನು ಅನಾಯಾಸವಾಗಿ ಪಾರಾಗುವೆನು; ಕುಲಸಮಳ ಜೀವನರಕ್ಷಣೆಯಾಗುವದು." ಎಂದು ಹೇಳಿದನು.

ಸೇಖಜಿಯು ಗಟ್ಟಿಯಾಗಿ ನಕ್ಕು—"ವೀರನೇ, ನಿನ್ನ ಕಡೆಯಿಂದ ನನ್ನನ್ನು ಕೊಲ್ಲುವದಕ್ಕಾಗುವಂತಿಲ್ಲ. ನಾನು ಶಕ್ತಿಹೀನನೂ, ನಿಶ್ಶಸ್ತ್ರನೂ ಆದ ಮುದುಕನು. ಇಂಥವನನ್ನು ನಿಮ್ಮಂಥ ವೀರರು ಸಂಹರಿಸಲಾರರೆಂಬದು ನನಗೆ ಗೊತ್ತುಂಟು. ಒಂದುವೇಳೆ ನಿಮಗೆ ಅಷ್ಟೊಂದು ಪ್ರಬಲವಾದ ಇಚ್ಛೆಯು ಇದ್ದರೆ, ನಾನು ನಿಮ್ಮೆದುರಿಗೆ

ಭದಿಸೆಟಿಸಿ ನಿಂತುಕೊಳ್ಳುತ್ತೇನೆ. ನನ್ನ ಜೀರ್ಣವಾದ ಹೊಟ್ಟೆಯಲ್ಲಿ ನಿಮ್ಮ ಚೂರಿಯನ್ನು ಚುಚ್ಚಿಬಿಡಿರಿ," ಎಂದು ಹೇಳಿದನು.

ಶಿಕಂದರನು ಅಪ್ರತಿಭನಾಗಿ, ಖಡ್ಗವನ್ನು ಒರೆಯಲ್ಲಿ ಸೇರಿಸಿದನು. ಅವನು ಸಿಟ್ಟಿನಿಂದ—ಸೇಖಜಿ, ಕುಲಸಮುಳನ್ನು ಕೊಲ್ಲುವ ವಿಚಾರವನ್ನು ಬಿಟ್ಟುಬಿಡು. ಇನ್ನು ಮುಂದೆ ಇಂಥ ಕೆಲಸಕ್ಕೆ ಎಂದೂ ಮನಸ್ಸು ಮಾಡಬೇಡ, ಎಂದು ಹೇಳಿದನು.

ಕುಲಸಮುಳನ್ನು ಕೊಲ್ಲುವ ಇಚ್ಛೆಯು ನಿಮಗಿಲ್ಲವಷ್ಟೇ! ಹಾಗಾದರೆ ಬೇರೆ ರೀತಿಯಿಂದ ನನಗೆ ಸಹಾಯಮಾಡಿರಿ. ಕುಲಸಮುಳು ಸುಂದರಿಯಾಗಿರುವಳು. ಸುಗುಣಿಯಾಗಿರುವಳು. ನಾನು ಅವಳೊಡನೆ ಸುಖದಿಂದ ಸಂಸಾರ ಮಾಡಬೇಕೆಂದು ಮಾಡಿದ್ದೇನೆ; ಆದರೆ ನನ್ನ ಈ ಸುಖಕ್ಕೆ ಸೋಹಾನಿಯು ಅಡ್ಡಬಂದಿರುವನು. ಅವನು ನಾಶಹೊಂದದಿದ್ದರೆ, ಸಂಸಾರದಲ್ಲಿ ನನಗೆ ಶಾಂತತೆಯು ದೊರೆಯುವಂತಿಲ್ಲ.

ಇದರಲ್ಲಿ ಕುಲಸಮುಳ ಅಪರಾಧವೇನು! ಎಲ್ಲ ದೋಷವು ಸೋಹಾನಿಯದೇ.

ಕುಲಸಮುಳ ಅಪರಾಧವೆಷ್ಟುಮಾತ್ರವೂ ಇಲ್ಲೆಂದು ಹೇಳಲಿಕ್ಕೆ ಬರುವಂತಿಲ್ಲ. ಬಡವನ ಹೆಂಡತಿಯಾದ ಅವಳು ಇಷ್ಟೊಂದು ರೂಪವತಿಯಾಗಿರುವದೇಕೆ; ಇದು ಅವಳ ಮೊದಲನೆಯತಪ್ಪು! ಕುಲಸಮುಳು ಒಂದುದಿನ ಸೋಹಾನಿಯು ಉಚ್ಛಿಷ್ಟಮದ್ಯವನ್ನು ಕುಡಿದದ್ದನ್ನು ನಾನು ನೋಡಿದ್ದೇನೆ. ಕುಲಸಮುಳು ಅವನಿಗೆ ಸಲುಗೆಯನ್ನು ಕೊಡದಿದ್ದರೆ, ಅವನು ನನ್ನೆದುರಿನಲ್ಲಿ ಈ ತರದ ಕೆಲಸ ಮಾಡುತ್ತಿದ್ದನೆ? ಈಗ ನಾನು ಸೋಹಾನಿಯನ್ನು ನಿರ್ಮೂಲ ಮಾಡಬೇಕಾಗಿದೆ. ಅವನ ಮರಣವನ್ನು ಕಣ್ಣಾರೆನೋಡದ ಹೊರತು ನನ್ನ ಹೊಟ್ಟೆಯೊಳಗಿನ ಉರಿಯು ಕಡಿಮೆಯಾಗುವಂತಿಲ್ಲ!"

"ಸೇಖಜೀ, ಸೋಹಾನಿಯು ನಮ್ಮಿಬ್ಬರಿಗೂ ಶತ್ರುವಾಗಿದ್ದಾನೆ. ನಾವಿಬ್ಬರೂ ಕೂಡಿ ಅವನನ್ನು ನಾಶ ಮಾಡೋಣ. ನಿನ್ನ ಸಹಾಯವಿಲ್ಲದೆ ನಾನು ಈ ಕೆಲಸವನ್ನು ಕಡೆಗಾಣಿಸಲಾರೆನು. ನೀನು ಈಗ

ಕುಲಸಮುಳನ್ನು ಕ್ಷಮಿಸಿಬಿಡು. ಧರ್ಮಪರಿಣೀತಳಾದ ಹೆಂಡತಿಯ ಮೇಲೆ ವೃಥಾ ಸಂದೇಹಗ್ರಸ್ತನಾಗುವದು ಸರಿಯಲ್ಲ. ನೀನೂ, ಅವಳೂ ಕೂಡಿ ನನಗೆ ಸಹಾಯಮಾಡಿರಿ. ನಾನು ಸೋಹಾನಿಯನ್ನು ಗೊತ್ತಿಗೆ ಹಚ್ಚುವೆನು.

"ಕುಲಸಮುಳು ನಿಮಗೆ ಸಹಾಯಮಾಡುವಳೆಂದು ತಿಳಿದುಕೊಂಡಿರುವಿರೇನು? ನೀವು ಭ್ರಾಂತರಾಗಿರುವಿರಿ. ಕುಲಸಮುಳು ಗುಲಸಾನೆಯ ದಾಸಿಯು. ಗುಲಸಾನೆಯು ಅವಳಿಗೆ ಮೇಲಿಂದಮೇಲೆ ಹಣ ಕೊಡುತ್ತಾಳೆ. ಕುಲಸಮುಳು ಸದಾ ಅವಳ ಇಚ್ಛೆಯಂತೆ ನಡೆಯುತ್ತಾಳೆ. ಅವಳು ನಿಮ್ಮನ್ನು ಸೋಹಾನಿಯ ಕೈಯ್ಯಲ್ಲಿ ಹಿಡಿದುಕೊಡಬೇಕೆಂದು ಯೋಚಿಸಬಹುದು. ಅದಕ್ಕಾಗಿ ನಿಮ್ಮ ಮುಂದೆ ಕಪಟತ್ವದಿಂದ ಏನಾದರೂ ಹೇಳಿರಬಹುದು. ನೀವು ಅದನ್ನು ನಂಬಬೇಡಿರಿ. ಈಗ ನಾನೊಂದು ಮಾರ್ಗವನ್ನು ತೋರಿಸುತ್ತೇನೆ. ನೀವು ನಾನು ಹೇಳಿಕೊಟ್ಟಂತೆ ನಡೆದರೆ, ಇಬ್ಬರಿಗೂ ಹಿತವಾಗುವದು. ನೀವು ಪ್ರತ್ಯಕ್ಷರೀತಿಯಿಂದ ಕುಲಸಮುಳನ್ನು ಕೊಲ್ಲುವ ಕಾರಣವಿಲ್ಲ. ನಾನು ಹೇಳಿದಂತೆ ನೀವು ನಡೆದರೆ, ಅವಳು ಅನಾಯಾಸವಾಗಿ ಸತ್ತುಹೋಗುವಳು."

" ಅದೇನು ಹೇಳು? "

" ನಾನು ಸೋಹಾನಿಯನ್ನು ಹಿಡಿಯುವದಕ್ಕೆ ನಿಮಗೆ ಸಹಾಯ ಮಾಡುವೆನು. ಇದಕ್ಕಾಗಿ ನೀವು ನನ್ನದೊಂದು ಮಾತನ್ನು ನಡೆಸಬೇಕು. "

" ಅದಾವದು? "

" ಸೋಹಾನಿಯು ಬಂದಿಯಾದ ತರುವಾಯ, ನೀವು ಅವನನ್ನು ಆಗ್ರಾಕ್ಕೆ ತೆಗೆದುಕೊಂಡು ಹೋಗುವಿರಿ. ಆಗ ನಾನೂ ಆಗ್ರಾಕ್ಕೆ ಬರುವೆನು; ಕುಲಸಮುಳು ಗುಲಸಾನೆಯ ಧನಲೋಭಕ್ಕೆ ಮೋಸಹೋಗಿ, ದಿಲ್ಲಿಯ ಸೇನಾಪತಿಯನ್ನು ಕರ್ತವ್ಯಭ್ರಷ್ಟನನ್ನಾಗಿ ಮಾಡುವದಕ್ಕೆ ಮುಂದುವರೆದಳೆಂದು ಬಾದಶಹನ ಮುಂದೆ ಫಿರ್ಯಾದಿ ಮಾಡುವೆನು.

ನೀವು ಇವನ್ನೊಪ್ಪಿಕೊಂಡರೆ ಸಾಕು: ಬಾದಶಹನು ಕುಲಸಮಳಿಗೆ ದೇಹಾಂತ ಶಿಕ್ಷೆಯನ್ನು ವಿಧಿಸುವನು. ನೀವು ಅವಳನ್ನು ಕೊಲ್ಲುವ ಕಾರಣವಿಲ್ಲ; ನಾನೂ ಕೊಲ್ಲುವ ಕಾರಣವಿಲ್ಲ. ಇಬ್ಬರೂ "ಸ್ತ್ರೀಹತ್ಯ"ದ ಪಾಪದಿಂದ ಪಾರಾಗುವೆವು.

ಶಿಕಂದರನು ಸೇಖಜಿಯೊಡನೆ ಹೆಚ್ಚಿಗೆ ಮಾತುಬೆಳೆಸಿ ಉಪಯೋಗ ವಿಲ್ಲೆಂದು ಭಾವಿಸಿ— "ನೀನು ಹೇಳಿದ್ದಕ್ಕೆ ನಾನು ಒಪ್ಪಿಕೊಳ್ಳುತ್ತೇನೆ" ಎಂದು ಅಂದನು.

ಹಾಗಾದರೆ ನೀವು ನಿಮ್ಮ ಖಡ್ಗವನ್ನು ಮುಟ್ಟಿ "ಆಣೆಮಾಡಿರಿ."

ಸೇಖಜಿ, ಆಣೆಮಾಡುವದು ಮಹಾಪಾತಕವು. ಕುರಾನವು ಆಣೆ ಮಾಡಬಾರದೆಂದು ಹೇಳುತ್ತದೆ. ನಾನು ಎಂದೂ ಸುಳ್ಳಾಡಿದವನಲ್ಲ. ನನ್ನ ಮೇಲೆ ನಿನ್ನ ನಂಬಿಗೆಯಿಲ್ಲವೆ? ಈಗ ಕುಲಸಮಳೆಲ್ಲಿದ್ದಾಳೆ? ನಾನು ಅವಳೊಡನೆ ಒಂದೆರಡು ಮಾತುಗಳನ್ನಾಡಬೇಕಾಗಿದೆ. ನಾನು ಅವಳನ್ನು ನನ್ನ ತಂಗಿಯೆಂದು ಭಾವಿಸಿದ್ದೇನೆ. ನೀನು ಈ ವಿಷಯದಲ್ಲಿ ಎಷ್ಟು ಮಾತ್ರವೂ ಸಂದೇಹ ತೆಗೆದುಕೊಳ್ಳಬೇಡ.

ಅವಳು ಈಗ ನೆಲಮನೆಯಲ್ಲಿ ಕುಳಿತು ಮದ್ಯಪಾನ ಮಾಡುತ್ತಿರಬ ಹುದು; ಇಲ್ಲವೆ ತನ್ನ ಕೋಣೆಯಲ್ಲಿ ಹಾಡುತ್ತ ಕುಳಿತುಕೊಂಡಿರಬ ಹುದು. ಸೋಹಾನಿಯನ್ನು ಹಿಡಿಯಬೇಕಾದರೆ, ಮೊದಲು ಕುಲಸಮ ಳನ್ನು ಪ್ರತಿಬಂಧದಲ್ಲಿರಸಲಿಕ್ಕೇ ಬೇಕು.

ಸೇಖಜಿ, ಈ ಕೆಲಸವು ಅಷ್ಟೊಂದು ಮಹತ್ವದ್ದಲ್ಲ. ಇದನ್ನು ಹೇಗಾ ದರೂ ಮಾಡಲಿಕ್ಕೆ ಬಂದೀತು.

"ಹಾಗಾದರೆ ಏಳಿರಿ. ಸೋಹಾನಿಯನ್ನು ಹಿಡಿಯಲಿಕ್ಕೆಹೋಗೋಣ"

ಈಗಲೇ?

ಹೌದು. ಸೋಹಾನಿಯನ್ನು ಹಿಡಿಯುವದಕ್ಕೆ ಇದೇ ಯೋಗ್ಯ ವೇಳೆಯು.

ನನ್ನ ಸಂಗಡ ಐವತ್ತು ಜನ ಸೈನಿಕರು ಬಂದಿದ್ದಾರೆ. ಅವರು ವೇಷಾಂತರದಿಂದ ಈ ನಗರದಲ್ಲಿ ವಾಸ ಮಾಡಿದ್ದಾರೆ. ಅವರಿಗೆ ಸೂಚನೆ

ಕೊಟ್ಟ ಹೊರತು ನಾನು ಯಾವ ಕೆಲಸವನ್ನೂ ಮಾಡಲಾರೆನು.

ಪತ್ರವನ್ನು ಬರೆದುಕೊಡರಿ. ನಾನು ಅವನ್ನು ನೀವು ಹೇಳಿದ ಮನುಷ್ಯನಿಗೆ ಮುಟ್ಟಿಸುವೆನು.

ಸೇಖಜಿ, ಅದಿರಲಿ. ಮೊದಲು ನಾನೊಂದು ಮಾತು ಕೇಳುತ್ತೇನೆ. ನಾವು ಯಾವ ಮಾರ್ಗವಾಗಿ ಕೋಟೆಯನ್ನು ಪ್ರವೇಶಿಸಬೇಕು?

ಒಂದು ಗುಪ್ತಮಾರ್ಗವದೆ. ಇದು ನಾಲ್ವರ ಹೊರತು ಇತರರಿಗೆ ಗೊತ್ತಿಲ್ಲ. ಈ ಮಾರ್ಗವನ್ನು ಸೋಹಾನಿ, ಗುಲಸಾನಾ, ಕುಲಸಮ ಮತ್ತು ನಾನು ಈ ವೇರೆಗೆ ನಾಲ್ವರೇ ಬಲ್ಲೆವು.

ಇರಬಹುದು. ಸೇಖಜಿ, ಇಂದಿನಿಂದ ನೀನು ನನ್ನ ಮಿತ್ರನು. ನೀನು ನನಗೆ ಚನ್ನಾಗಿ ಸಹಾಯ ಮಾಡಿದೆಯಾದರೆ, ನಾನು ಬಾದಶಹ ನಿಗೆ ಹೇಳಿ ಬೆಲೆಯುಳ್ಳ ವಸ್ತ್ರಗಳನ್ನೂ, ಜಹಾಗೀರನ್ನೂ ಕೊಡಿಸುವೆನು. ದಿಲ್ಲಿಯ ಬಾದಶಹನಲ್ಲಿ ಯಾವದಕ್ಕೂ ಕೊರತೆಯಿಲ್ಲ. ನೀನು ಬೇಡಿದ್ದನ್ನು ಅವನು ಕೊಡುವನು.

ಸೇಖಜಿಗೆ ತುಂಬಾ ಆನಂದವಾಯಿತು. ಅವನು ಹಾಸ್ಯಮುಖ ನಾಗಿ—ಸಾಹೇಬ, ಆಜ್ಞಾಪತ್ರವನ್ನು ಬರೆದುಕೊಡಿರಿ ಅದನ್ನು ನಿಮ್ಮ ಸೈನಿಕರ ಮುಖ್ಯಸ್ಥನಿಗೆ ಮುಟ್ಟಿಸಿ, ಅವನು ಕೂಡಲೇ ನಿಮ್ಮ ಅಪ್ಪಣೆ ಯಂತೆ ನಡೆದುಕೊಳ್ಳುವಂತೆ ಮಾಡುತ್ತೇನೆ, ಎಂದು ಹೇಳಿದನು.

ಶಿಕಂದರನು ಬೆಳದಿಂಗಳ ಸಹಾಯದಿಂದ ಒಂದು ಪತ್ರವನ್ನು ಬರೆ ದುಕೊಟ್ಟನು. ಸೇಖಜಿಯು ಅದನ್ನು ತೆಗೆದುಕೊಂಡು ಹೋದನು. ಶಿಕಂ ದರನು ಈ ವರೆಗೆ ನಡೆದ ರಹಸ್ಯಮಯವಾದ ವ್ಯಾಪಾರವನ್ನು ಕುರಿತು ಯೋಚನೆ ಮಾಡುತ್ತ ಕುಳಿತುಕೊಂಡನು.

ಸುಮಾರು ಅರ್ಧತಾಸಿನ ಮೇಲೆ ಸೇಖಜಿಯು ತಿರುಗಿ ಬಂದು— ಸಾಹೇಬ, ಈ ಮನೆಯ ಹಿಂಭಾಗದಲ್ಲಿರುವ ತೋಟದಲ್ಲಿ ಸೈನಿಕರು ಕುಳಿ ತಿದ್ದಾರೆ. ತಾವು ತೀವ್ರಬರಬೇಕು, ಎಂದು ಹೇಳಿದನು.

ಶಿಕಂದರನು ಸಿದ್ಧನಾಗಿ ಕುಳಿತಿದ್ದನು. ಅವನು ಬೇರೆ ಮಾತಾಡದೆ, ಸೇಖಜಿಯ ಬೆನ್ನುಹತ್ತಿ ನಡೆದನು. ಶಿಕಂದರನು ಸೈನಿಕರಿಗೆ ತನ್ನನ್ನ

ನುಸರಿಸಿ ಬರುವದಕ್ಕೆ ಹೇಳಿ, ಸೇಖಜಿಯೊಡನೆ ಮುಂದೆ ನಡೆದನು. ಇಬ್ಬರೂ ಕೋಟೆಯನ್ನೇರಿ ಹೋಗುವ ಗುಪ್ತಮಾರ್ಗದಿಂದ ಮುಂದೆ ಸಾಗಿದರು. ಯಾರಬಾಯಿಯಿಂದಲೂ ಮಾತಿಲ್ಲ. ಶಿಕಂದರನು ಆನಂದ ದಿಂದ ಸೇಖಜಿಯನ್ನು ಕುರಿತು—“ ಬೆಳಗಾಗುವದರೊಳಗೆ, ಸೋಹಾನಿಯು ಬಂದಿಯಾಗುವನು. ಬಾದಶಹನ ಮನೋಬಯಕೆಯು ನೆರವೇರುವದು. ನಾನು ಬಾದಶಹನಿಂದ ಬಹಳ ಗೌರವವನ್ನು ಹೊಂದು ವೆನು. ಇದಕ್ಕೂ ದೊಡ್ಡ ಪದವಿಗೇರಿ, ಸುಖಹೊಂದುವೆನು.

ಶಿಕಂದರ, ಮುಂದಾಗುವದನ್ನು ನೀನು ಹೇಗೆ ತಿಳಿಯಬಲ್ಲೆ! ದುರ್ದೈವವು ಕೈತೊಳೆದುಕೊಂಡು ಬೆನ್ನುಹತ್ತಿರುವದು ನಿನಗೆ ಹೇಗೆ ಗೊತ್ತಾಗಬೇಕು? ಅದು ನಿನ್ನನ್ನು ದುಃಖಸಾಗರದಲ್ಲಿ ಕೆಡವುವವರೆಗೆ ನೀನು ಕಾಲ್ಪನಿಕ ಸುಖದ ಉಪಭೋಗವನ್ನು ಯಥೇಚ್ಛವಾಗಿ ತೆಗೆದು ಕೊಳ್ಳು.

ಶಿಕಂದರನೂ, ಸೇಖಜಿಯೂ ಗುಡ್ಡವನ್ನೇರಿ ತುಸು ದೂರ ಹೋದ ಬಳಿಕ, ಕೋಟೆಯ ಗೋಡೆಯು ಕಾಣಹತ್ತಿತು. ಉಜ್ವಲವಾದ ಚಂದ್ರ ಪ್ರಕಾಶದಲ್ಲಿ ಅದು ಥಳಥಳಿಸುತ್ತಲಿತ್ತು. ಅರಮನೆಯ ಅಂತಸ್ತಿನ ಮೇಲಿ ರುವದೊಂದು ಕೋಣೆಯಲ್ಲಿ ದೀಪವಿನ್ನೂ ಉರಿಯುತ್ತಲಿತ್ತು. ಕೋಣೆಯ ಕಿಡಿಕಿಗಳು ತೆರೆಯಲ್ಪಟ್ಟಿರುವದರಿಂದ ಆ ದೀಪದ ಕಿರಣಗಳು ಹೊರಗೆ ಬಿದ್ದಿದ್ದವು.

ಸೇಖಜಿಯು ಮುಂದೆ ನಡೆದಿದ್ದನು. ಅವನು ಭಯಭೀತನಾಗಿ ನಿಂತುಕೊಂಡು—ಸಾಹೇಬ, ಬಹಳ ಅನರ್ಥವಾಯಿತು! ಎಂದು ಅಂದನು.

ಸೋಹಾನಿಯ ಅರಮನೆಯ ಕಾವಲುಗಾರನು ನಮ್ಮನ್ನು ನೋಡಿ ರಬಹುದು, ಇದನ್ನು ತಿಳಿದು ಸೇಖಜಿಯು ಹೀಗೆ ಗಾಬರಿಯಾಗಿರಬ ಹುದು ಎಂದು ಭಾವಿಸಿ, ಶಿಕಂದರನು—ಸೇಖಜಿ, ಹೀಗೇಕೆ ಮಾಡುವೆ? ಆದದ್ದಾದರೂ ಏನಾಯಿತು? ಲಗು ಹೇಳು, ಎಂದು ಕೇಳಿದನು.

ಅಲ್ಲಿ ನೋಡಿರಿ. ದೀಪವು ಕಾಣುತ್ತಲಿದೆ. ಅದು ಸೋಹಾನಿಯು ಮಲಗುವ ಮನೆಯೊಳಗಿನದು. ಸೋಹಾನಿಯು ಇನ್ನೂ ಎಚ್ಚರಿರುವಂತೆ

ತೋರುತ್ತದೆ. ಅವನು ಈ ಹೊತ್ತಿನಲ್ಲಿ ಎಚ್ಚರಿಕೆಯಿಂದಿರಬಹುದೆಂಬದನ್ನು ನಾನು ಭಾವಿಸಿಗಲಿಲ್ಲ. ಅದಕ್ಕಾಗಿಯೇ ಈ ಹೊತ್ತಿನಲ್ಲಿ ನಿಮ್ಮನ್ನಿಲ್ಲಿಗೆ ಕರೆದುಕೊಂಡು ಬಂದೆನು. ಇಂದು ಯಾವದೊಂದು ಉತ್ಸವವಿರಬಹುದು. ಸೋಹಾನಿಯು ಆ ಉತ್ಸವದಲ್ಲಿ ಮತ್ತನಾಗಿ ಈ ವರೆಗೆ ಮಲಗದೆ ಇರಬಹುದು. ನಾವು ಹೀಗೆಯೇ ಮುಂದೆ ಸಾಗಿದರೆ, ಕೋಟೆಯ ಹಿಂಭಾಗದಲ್ಲಿರುವ ಬಾಗಿಲಬಳಿಗೆ ಹೋಗುವೆವು; ಆದರೆ ಇನ್ನು ನಾನು ನಿಮ್ಮೊಡನೆ ಬರಲಾರೆನು. ಕೋಟೆಯ ಬಾಗಿಲದ ಬಳಿಯಲ್ಲಿ ಕಾವಲುಗಾರರು ಎಚ್ಚತ್ತು ಕುಳಿತಿರಬಹುದು. ಧೈರ್ಯವೂ, ಚಾತುರ್ಯವೂ ನಿಮಗಿದ್ದರೆ ಮುಂದೆ ಸಾಗಿರಿ. ಕಾವಲುಗಾರರನ್ನು ಸಂಹರಿಸಿ, ಕೋಟೆಯನ್ನು ಪ್ರವೇಶಿಸಿರಿ. ಇಲ್ಲದಿದ್ದರೆ ಹಿಂದಿರುಗಿ ನಡೆಯಿರಿ. ಪಠಾಣರು ಬಹುಕ್ರೂರರು. ನೀವು ಪಠಾಣರಕೈಯಲ್ಲಿ ಸಿಕ್ಕಿರಾದರೆ, ಬೆಳಗಾಗುವದರೊಳಗೆ ಹೇಳಹೆಸರಿಲ್ಲದೆ ಹೋಗುವಿರಿ. ಈ ಈದಲಗಡವು ಮೊಗಲರರಕ್ತದಿಂದ ರಂಜಿತವಾಗುವದು. ಇನ್ನು ನಾನು ಹೇಳುವದಾಯಿತು. ತಿರುಗಿ ಹೋಗುವೆನು. ನಿಮ್ಮ ಮನಸ್ಸಿಗೆ ಬಂದಂತೆ ಮಾಡಬಹುದು. ನಿಮ್ಮೊಡನೆ ಸೋಹಾನಿಯ ಕೈಯಲ್ಲಿ ಸಿಕ್ಕು ಸತ್ತು ಹೋಗುವ ಇಚ್ಛೆಯು ನನಗಿಲ್ಲ

ಶಿಕಂದರನಿಗೆ ಈ ಮಾತಿನಿಂದ ಬಹಳ ಸಿಟ್ಟು ಬಂತು. ಅವನು ಸೇಖಜಿಯನ್ನು ಕುರಿತು—“ಹೇಡಿಯೆ, ಮತ್ತೊಬ್ಬನಾವನಾದರೂ ನಿನ್ನಂತೆ ವರ್ತಿಸಿದ್ದರೆ ಅವನನ್ನು ಇಲ್ಲಿಯೇ ತುಂಡರಿಸಿಬಿಡುತ್ತಿದ್ದೆನು! ಸುಂದರಿಯಾದ ಕುಲಸಮುಳನ್ನು ವಿಧವೆಯನ್ನಾಗಿ ಮಾಡುವ ಇಚ್ಛೆಯು ನನಗಿಲ್ಲ; ಅವಳು ನನ್ನ ತಂಗಿಯು. ತಂಗಿಯ ಗಂಡನಾದ ನಿನ್ನನ್ನು ಕೊಲ್ಲಲಾರೆನು. ವಿಶ್ವಾಸಘಾತುಕನಾದ ನೀನು ಈಗ ಬೇಕಾದತ್ತ ಹೋಗಬಹುದು. ನಾನು ಬೇಡೆನ್ನುವದಿಲ್ಲ. ಇನ್ನು ನಿನ್ನ ಸಹಾಯವು ನನಗೆ ಬೇಕಾಗಿಲ್ಲ.” ಎಂದು ಹೇಳಿದನು. ಸೇಖಜಿಯು ಸಲಾಂಮಾಡಿ ಓಡಿಹೋಗಿಬಿಟ್ಟನು. ಶಿಕಂದರನು ವಿಷಮಸಂಕಟದಲ್ಲಿ ಬಿದ್ದನು. ಆದರೂ ಅವನು ಧೈರ್ಯದಿಂದ ಹಾಗೇ ಮುಂದೆ ಸಾಗಿದನು. ಕೋಟೆಯ ಬಾಗಿಲವು ಕಾಣಹತ್ತಿತು. ಅವನು ಬಾಗಿಲದಬಳಿಗೆ ಹೋಗಿ ನೋಡಿದನು. ಬಾಗಿಲವು ಸಣ್ಣದಿದ್ದರೂ,

ಗಟ್ಟಿಮುಟ್ಟಿಯಾಗಿತ್ತು. ಅದನ್ನು ಸುಲಭವಾಗಿ ಮುರಿಯಲಿಕ್ಕೆ ಬರು ವಂತಿದ್ದಿಲ್ಲ. ಶಿಕಂದರನು ಅದನ್ನು ದೂಡಿ ನೋಡಿದನು. ತೆರೆಯಲಿಕ್ಕೆ ಬರಲಿಲ್ಲ. ಶಿಕಂದರನು ವಿಚಾರಪರನಾಗಿ ನಿಂತುಕೊಂಡನು. ಕೋಟೆಯ ಬಾಗಿಲವನ್ನು ಮುರಿಯುವ ಸುಲಭ ಉಪಾಯವು ಅವನಿಗೆ ತೋಚಲಿಲ್ಲ. "ಬಂದಹಾದಿಗೆ ಸುಂಕವಿಲ್ಲ" ವೆಂಬಂತೆ ತಿಳಿದು, ತಿರುಗಿಹೋಗುವ ಇಚ್ಛೆಯು ಅವನಿಗಿರಲಿಲ್ಲ.

ಚಂದ್ರನು ಮುಳುಗುವದರಲ್ಲಿದ್ದನು. ಅವನ ಮಂದಪ್ರಕಾಶವು ಸುತ್ತಲೂ ಬಿದ್ದಿತ್ತು; ಶಿಕಂದರನು ಸುತ್ತಲೂ ನೋಡಿದನು. ಅವನಿಗೆ ದೂರವಲ್ಲಿ ಯಾರೋ ಬರುತ್ತಿರುವಂತೆ ಕಾಣಿಸಿತು. ಶಿಕಂದರನು, ಸೇಖ ಜಿಯು ಅನುತಪ್ತನಾಗಿ ತಿರುಗಿ ಬಂದಿರಬಹುದೆಂದು ಭಾವಿಸಿದನು. ಆ ವ್ಯಕ್ತಿಯು ಸಮೀಪದಲ್ಲಿ ಬಂದಿತು. ಶಿಕಂದರನು ನೋಡಿದನು. ಅದು ಪುರುಷವ್ಯಕ್ತಿಯಾಗಿರದೆ, ಸ್ತ್ರೀಮೂರ್ತಿಯಾಗಿತ್ತು. ಇಂತಹ ರಾತ್ರಿಯಲ್ಲಿ ಈ ಸ್ಥಳದಲ್ಲಿ ಇವಳೇಕೆ ಬರುತ್ತಿರಬಹುದೆಂದು ಯೋಚಿಸಿ, ಶಿಕಂದರನು ಆಶ್ಚರ್ಯಾನ್ವಿತನಾದನು. ಅನನು ಆ ಸ್ತ್ರೀವ್ಯಕ್ತಿಯ ಕಡೆಗೆ ಹೋದನು. ಅವಳ ಬಳಿಗೆಹೋಗಿ— "ನೀನು ಯಾರು? ಸತ್ಯಮಾತಾಡು; ಇಲ್ಲದಿದ್ದರೆ ವಿಪತ್ತಿಗೆ ಗುರಿಯಾಗುವೆ," ಎಂದು ಅಂದನು.

"ಅಣ್ಣಾ, ಶಾಂತನಾಗು. ನಾನು ಕುಲಸಮುಳು—ನಿನ್ನ ತಂಗಿಯು," ಎಂದು ಆ ವ್ಯಕ್ತಿಯು ಹೇಳಿತು. "ತಂಗೀ, ಈ ಹೊತ್ತಿನಲ್ಲಿ ನೀನು ಇಲ್ಲಿಗೇಕೆ ಬಂದೆ?" ಎಂದು ಶಿಕಂದರನು ವಿಸ್ಮಯದಿಂದ ಕೇಳಿದನು. "ಅಣ್ಣಾ, ಮೆಲ್ಲಗೆ ಮಾತಾಡು. ನನ್ನ ಗಂಡನು ಬಹಳ ಪುಕ್ಕನು. ಅವನು ನಡುವೆ ಎಲ್ಲಿಯಾದರೂ ಭಯಗ್ರಸ್ತನಾಗಿ ತಿರುಗಿ ಓಡಿಬರುವನೆಂದು ನಾನು ಮೊದಲೇ ಭಾವಿಸಿದ್ದೆನು. ಮೇಲಾಗಿ ಈ ಬಾಗಿಲದ ಕೀಲಿಯ ಕೈಯು ನನ್ನ ಬಳಿಯಲ್ಲಿತ್ತು. ಸೇಖಜಿಯು ಅವಸರದಲ್ಲಿ ಇದನ್ನು ಮರೆತುಬಂದಿದ್ದನು. ಅದಕ್ಕಾಗಿ ನಾನು ನಿಮ್ಮನ್ನು ಹಿಂಬಾಲಿಸಿಬರಬೇಕಾಯಿತು. ನಾನು ನಿನಗೆ ಸಹಾಯಮಾಡುವ ವಚನವನ್ನು ಕೊಟ್ಟಿದ್ದೆನು. ಆ ವಚನದಂತೆ ಕೆಲಸಮಾಡಲೇಬೇಕಾಗಿತ್ತು. ಆ ಪ್ರಕಾರ ನಿಮಗೆ

ಕಾಣದಂತೆ ನಿಮ್ಮನ್ನನುಸರಿಸಿಬಂದೆನು. ಸೇಖಜಿಯು ಓಡಿಹೋದದ್ದನ್ನು ತಿಳಿದು, ಈಗ ನಿನ್ನ ಬಳಿಗೆ ಬಂದಿದ್ದೇನೆ."

ಶಿಕಂದರನು ಮನಸ್ಸಿನಲ್ಲಿಯೇ ಅಂದುಕೊಂಡನು—ಕುಲಸಮುಳು ದೇವರ ಅಪೂರ್ವ ಸೃಷ್ಟಿಯ ಉದಾಹರಣ ಸ್ವರೂಪಳು. ಇಂತಹ ಬುದ್ಧಿವಂತೆಯಾದ ಹೆಂಡತಿಯು ದೊರಕಿದ್ದರೂ ಸೇಖಜಿಯು ದುಃಖಿತನಾಗಿರುವನು! ಅಂದಬಳಿಕ ಅವನಿಗೇನೆನ್ನಬೇಕು?

ಶಿಕಂದರನು ಸುಮ್ಮನಿರುವದನ್ನು ನೋಡಿ ಕುಲಸಮುಳು—
"ಅಣ್ಣಾ, ಆಶ್ಚರ್ಯಾನ್ವಿತನಾಗಬೇಡ. ನಾನು ಮರೆಯಲ್ಲಿ ನಿಂತು ಸೇಖಜಿಯ ಮತ್ತು ನಿನ್ನ ಯಾವತ್ತು ಮಾತುಗಳನ್ನು ಕೇಳಿದ್ದೇನೆ. ಸೇಖಜಿಯು ಅತಿಹೀನ ಮನುಷ್ಯನು! ಸೋಹಾನಿಯು ನನ್ನ ಪ್ರೇಮಾಕಾಂಕ್ಷಿಯಾಗಿರುವದು ಅವನಿಗೆ ಗೊತ್ತುಂಟು. ಇಂತಹ ಪ್ರಸಂಗದಲ್ಲಿ ಅವನು ಸೋಹಾನಿಯನ್ನು ಶಾಸನಮಾಡುವದು ಅವಶ್ಯವು, ಆದರೆ ಅವನು ಹಾಗೆ ಮಾಡದೆ, ನನ್ನನ್ನು ಕೊಲ್ಲುವ ಮನಸ್ಸು ಮಾಡುತ್ತಿರುವನು! ಸೋಹಾನಿಯನ್ನು ಸಂಹರಿಸುವ ಶಕ್ತಿಯು ಸೇಖಜಿಯಲ್ಲಿ ಇಲ್ಲವೆಂಬದು ನಿಜವು. ಅಣ್ಣಾ, ದೇವರ ಆಣೆಮಾಡಿ ಹೇಳುತ್ತೇನೆ. ನಾನು ಅಪರಾಧಿಯಲ್ಲ. ವ್ಯಭಿಚಾರಕ್ಕೆ ಎಂದೂ ಮನಸ್ಸುಮಾಡಿದವಳಲ್ಲ. ಈವರೆಗೆ ಸತೀಧರ್ಮದಿಂದ ವಂಚಿತಳಾದವಳಲ್ಲ. ಮೊದಲು ನಿನ್ನೊಡನೆ ಮಾತಾಡಿದ್ದು, ಕೇವಲ ನಿನ್ನ ಮನಸ್ಸನ್ನು ಪರೀಕ್ಷೆ ಮಾಡುವದಕ್ಕಾಗಿಯಲ್ಲದೆ ಬೇರಿಲ್ಲ, ಎಂದು ಹೇಳಿದಳು.

ಸಮಯವು ವ್ಯರ್ಥವಾಗಿ ಕಳೆದುಹೋಗುತ್ತಿರುವದನ್ನು ತಿಳಿದು, ಶಿಕಂದರನು—ತಂಗೀ, ನನಗೆ ಎಲ್ಲವೂ ತಿಳಿದದೆ. ನೀನು ನಿಶ್ಚಿಂತಳಾಗಿರು. ನಾನು ಇಲ್ಲಿ ಇರುವವರೆಗೆ ನಿನ್ನ ಕೂದಲು ಸಹ ಕೊಂಕಗೊಡುವದಿಲ್ಲ. ಅಲ್ಲಿ ನೋಡು. ಅಂತಸ್ತಿನ ಮೇಲಿನ ಕೋಣೆಯ ದೀಪವು ಶಾಂತವಾಯಿತು. ಇದರಿಂದ ಸೋಹಾನಿಯು ಮಲಗಿಕೊಂಡಂತೆ ತೋರುತ್ತದೆ. ನೀನು ಈ ಬಾಗಿಲವನ್ನು ತೆರೆದುಕೊಡು. ಈ ಸುಸಂಧಿಯಲ್ಲಿ ನಾನು ಕೋಟೆಯಲ್ಲಿ ಪ್ರವೇಶಿಸುವೆನು, ಎಂದು ಹೇಳಿದನು.

ಅಣ್ಣಾ, ಒಳ್ಳೇ ಹೊತ್ತಿಗೆ ನಾನಿಲ್ಲಿಗೆ ಬಂದೆನು. ಈಗ ನೀನು ಕೋಟೆಯನ್ನು ಪ್ರವೇಶಿಸುವದಕ್ಕೆ ಅನುಕೂಲ ಸಮಯವನ್ನು ಹೊಂದಿರುವೆ. ಸೋಹಾನಿಯು ಇಂದು ಮಿತಿಮೀರಿ ಮದಿರೆಯನ್ನು ಸೇವಿಸಿ, ಉನ್ಮತ್ತನಾಗಿರುವಂತೆ ತೋರುತ್ತದೆ. ಇಲ್ಲದಿದ್ದರೆ ಅವನು ಇಷ್ಟುಹೊತ್ತಿನ ವರೆಗೆ ಎಚ್ಚರಿರುತ್ತಿದ್ದಿಲ್ಲ.

ಕುಲಸಮಳು ಬಾಗಿಲದ ಬಳಿಗೆ ಹೋಗಿ, ತನ್ನ ಹತ್ತರಿರುವ ಕೀಲಿಯ ಕೈಯನ್ನು ಹೊರಗೆ ತೆಗೆದು, ಬಾಗಿಲವನ್ನು ತೆರೆದಳು. ತರುವಾಯ ಅವಳು ಕೀಲಿಯ ಕೈಯನ್ನು ಪುನಃ ತನ್ನ ಬಳಿಯಲ್ಲಿಟ್ಟು ಕೊಂಡು—ಅಣ್ಣಾ, ಬಹಳ ಎಚ್ಚರಿಕೆಯಿಂದ ಕೆಲಸಮಾಡು. ಪಠಾಣರು ಬಹಳ ಕ್ರೂರರು. ಅವರಲ್ಲಿ ಸೋಹಾನಿಯು ಹೆಚ್ಚಿನವನು. ನೀನು ಈಮೋವಂಚನೆಯಿಂದ ಒಳಹೊಕ್ಕದ್ದು ತಿಳಿದ ಕೂಡಲೆ, ಹಸಿದ ಹುಲಿಯಂತೆ ಅವನು ನಿನ್ನ ಮೇಲೆ ಬೀಳುವನು. ಸೋಹಾನಿಯ ಹೆಂಡತಿಯು ಗಂಡನಿಗಿಂತಲೂ ಕ್ರೂರಳು. ಬಹಳ ಚತುರೆಯು. ನೀನು ಯುಕ್ತಿಯಿಂದಲೂ, ಧೈರ್ಯದಿಂದಲೂ ಕೆಲಸಮಾಡು. ಸೋಹಾನಿಯನ್ನು ಹಿಡಿದೆಯಾದರೆ, ಮತ್ತೆ ನನ್ನ–ನಿನ್ನ ಭೆಟ್ಟಿಯಾಗುವದು. ಇಲ್ಲದಿದ್ದರೆ ಇದೇ ನಿನ್ನ ಕಡೆಯ ದರ್ಶನವು, ಎಂದು ಹೇಳಿ ಹೊರಟುಹೋದಳು.

ಶಿಕಂದರನು ಅಲ್ಲಿ ಒಬ್ಬನೇ ಉಳಿದನು. ಸೈನಿಕರಿಗೆ ತನ್ನಿಂದ ತುಸು ದೂರದಲ್ಲಿರುವಂತೆ ಮೊದಲೇ ಅಪ್ಪಣೆ ಮಾಡಿದ್ದನು. ಈಗ ಅವನಿಗೆ ಸೈನಿಕರ ಅವಶ್ಯಕತೆಯಾಯಿತು. ಅದಕ್ಕಾಗಿ ಅವನು ತನ್ನಲ್ಲಿರುವ ಕೊಳಲನ್ನು ಹೊರಗೆ ತೆಗೆದು ಊದಿದನು.

---

# ೬ ನೆಯ---ಪರಿಚ್ಛೇದ.



ಶಿಕಂದರನು ಕೊಳಲನ್ನೂದಿದ ತುಸುಹೊತ್ತಿನಲ್ಲಿ ಹತ್ತುಜನ ಸೈನಿಕರು, ತಮ್ಮ ಒರೆಯಿಂದ ಹಿರಿದ ಕತ್ತಿಗಳನ್ನು ಝಳಪಿಸುತ್ತ ಬಂದರು.

ಶಿಕಂದರನು ಅವರ ಮುಖ್ಯಸ್ಥನನ್ನು ಕುರಿತು—" ಮುಹಮ್ಮದಲ್ಲಿ, ಈ ಜನರನ್ನು ಕರೆದುಕೊಂಡು ಆ ಕೋಣೆಯ ದಿಕ್ಕಿಗೆ ನಡೆ. ಹಾದಿ ಯಲ್ಲಿ ಯಾರಾದರೂ ನಿಮ್ಮನ್ನು ತಡೆದರೆ, ಕೂಡಲೇ ಅವರನ್ನು ತುಂಡ ರಿಸಿಬಿಡಿರಿ, "ಎಂದು ಅಪ್ಪಣೆಮಾಡಿದನು. ಸೈನಿಕರು ಮುಂದೆನಡೆದರು. ಶಿಕಂದರನು ಪುನಃ ಕೊಳಲನ್ನೂದಿದನು. ಹದಿನೈದು ಜನ ಸೈನಿಕರು ಅವನ ಬಳಿಗೆ ಬಂದರು. ಶಿಕಂದರನು ಐವರನ್ನು ಅಲ್ಲಿನಿಲ್ಲಿಸಿ, ಉಳಿದ ಹತ್ತು ಜನರನ್ನು ಕರೆದುಕೊಂಡು ಮುಂದೆ ಸಾಗಿದನು.

ಶಿಕಂದರನು ತುಸು ಮುಂದೆ ಹೋದಬಳಿಕ, ಅವನಿಗೆ ಒಬ್ಬ ಕಾವ ಲುಗಾರನು ಭೆಟ್ಟಿಯಾದನು. ಆ ಕಾವಲುಗಾರನು ಮೊಗಲ ಸೈನಿಕರನ್ನು ನೋಡಿ, ಚೀತ್ಕಾರಮಾಡಿ,—"ಶತ್ರುಗಳು ಬಂದಿದ್ದಾರೆ. ಎಚ್ಚರಾಗಿರಿ. ಆಯುಧಗಳನ್ನು ತೆಗೆದುಕೊಂಡು ಯುದ್ಧಕ್ಕೆಸಿದ್ಧರಾಗಿರಿ" ಎಂದು ತನ್ನ ಜನರನ್ನು ಎಚ್ಚರಗೊಳಿಸಲು ಯತ್ನಿಸಿದನು. ಕೂಡಲೇ ಒಬ್ಬ ಮೊಗಲ ಸೈನಿಕನು, ಅವನ ರುಂಡವನ್ನು ಹಾರಿಸಿದನು. ಅಗಮನೆಯ ಕಾವಲುಗಾರ ರಲ್ಲಿ ಮತ್ತೆ ಯಾವನೂ ಮುಂದೆ ಬರಲಿಲ್ಲ. ಇದನ್ನು ನೋಡಿ, ಶಿಕಂದರ ನಿಗೆ ತುಂಬಾ ಆನಂದವಾಯಿತು. ಅವನು ಅಲ್ಲಿ ಐವರನ್ನು ನಿಲ್ಲಿಸಿ, ಉಳಿದ ಐವರನ್ನು ಸಂಗಡ ಕರೆದುಕೊಂಡು ಮುಂದೆ ಹೊರಟನು.

ಎದುರಿನಲ್ಲಿಯೇ ಸೋಹಾನಿಯ ದರಬಾರದಗ್ರುಹವಿತ್ತು. ಅದರ ಬಳಿ ಯಲ್ಲಿ ಅಂತಸ್ತನ್ನೇರಿಹೋಗುವದಕ್ಕೆ ಪಾವಟಿಗೆಗಳಿದ್ದವು. ಶಿಕಂದರನು ಪಾವಟಿಗೆಗಳ ಬಳಿಯಲ್ಲಿ ತನ್ನ ಜನರನ್ನಿರಿಸಿ, ಒಬ್ಬನೇ ಮೇಲೇರಿ ನಡೆ ದನು. ಮೆಟ್ಟಲುಗಳನ್ನೇರಿ ಹೋದ ಬಳಿಕ ಚಂದ್ರಶಾಲೆಯಿದ್ದು, ಅದಕ್ಕೆ ಹೊಂದಿ ಅನೇಕ ಕೋಣೆಗಳಿದ್ದವು. ಶಿಕಂದರನು ಚಂದ್ರಶಾಲೆಯಲ್ಲಿ ಹೋಗಿ ನಿಂತುಕೊಂಡನು.

ಚಂದ್ರಶಾಲೆಯ ನೆಲವು ಸ್ಫಟಿಕಶಿಲೆಗಳಿಂದ ನಿರ್ಮಿತವಾದದ್ದು. ಅನೇಕ ಸ್ಥಳಗಳಲ್ಲಿ ಅದೇ ಅರಳಿದ ಸುಗಂಧಪೂರ್ಣ ಹೂಮಾಲೆಗಳು ತೂಗ ಬಿದ್ದಿದ್ದು, ಅವು ಸುತ್ತಲೂ ಸುವಾಸನೆಯನ್ನು ಹರವಿದ್ದವು. ಒತ್ತಟ್ಟಿಗೆ ಗುಲಾಬೀನೀರಿನ ಕಾರಂಜಿಯಿದ್ದು, ಅದರೊಳಗಿನ ನೀರು ಹಾರುತ್ತಲಿತ್ತು.

ಶಿಕಂದರನು ಸಂತೋಷಹೊಂದಿ, ಕೋಣೆಗಳ ಕಡೆಗೆ ನೋಡಿದನು. ಅನೇಕ ಕೋಣೆಗಳಿದ್ದವು. ಎಲ್ಲವುಗಳ ಆಕಾರವು ಒಂದೇ ತರಹವಾಗಿತ್ತು. ಕೆಲವು ಕೋಣೆಗಳಲ್ಲಿ ಚಿತ್ರ ವಿಚಿತ್ರ ವರ್ಣದ ದೀಪಗಳು ಉರಿಯುತ್ತಲಿದ್ದವು. ಯಾವ ಕೋಣೆಯಲ್ಲಿಯೂ ಜನರಿದ್ದಂತೆ ತೋರಲಿಲ್ಲ. ನಿಸ್ತಬ್ಧತೆಯು ವ್ಯಾಪಿಸಿಬಿಟ್ಟಿತ್ತು.

ಈ ಸ್ಥಿತಿಯನ್ನು ನೋಡಿ ಶಿಕಂದರನಿಗೆ ಬಹಳ ಸಮಾಧಾನವಾಯಿತು. ಅವನು ಸೋಹಾನಿಯ ಕೋಣೆಯು ಯಾವದಾಗಿರಬಹುದೆಂದು ಯೋಚಿಸಿದನು. ಆ ಕೋಣೆಗಳಲ್ಲಿ ಇಂಥದೇ ಸೋಹಾನಿಯ ಶಯನಗ್ರಹವಾಗಿರಬಹುದೆಂದು ತರ್ಕಿಸಲಿಕ್ಕೆ ಯಾವಸಾಧನವೂ ಇರಲಿಲ್ಲ. ಶಿಕಂದರನು ತುಸು ಹೊತ್ತು ಯೋಚನೆ ಮಾಡಿ, ಮುಂದೆ ನಡೆದನು. ಈ ಸಮಯದಲ್ಲಿ ಶಿಕಂದರನ ಬಲಕ್ಕಿರುವದೊಂದು ಕೋಣೆಯ ಬಾಗಿಲವು ತೆರೆಯಲ್ಪಟ್ಟಿತು. ಶಿಕಂದರನು ಆ ಕಡೆಗೆ ನೋಡಿದನು. ವಿಸ್ಮಯದಿಂದ ಮುಂದೆ ಹೆಜ್ಜೆಯನ್ನಿಕ್ಕಲಾರದೆ ನಿಂತುಬಿಟ್ಟನು.

ಒಬ್ಬ ರಮಣಿಯು ಕೋಣೆಯಿಂದ ಹೊರಬಿದ್ದಳು. ಅವಳ ಎಡಗೈಯಲ್ಲಿ ದೀಪವಿತ್ತು. ಬಲಗೈಯಲ್ಲಿ ಮದಿರೆಯಿಂದ ತುಂಬಿದ ಬಂಗಾರದ ಪಾತ್ರೆಯಿತ್ತು. ಹಾರಾಡುತ್ತಿರುವ ಅವಳ ಮುಂಗುರುಳು ದೀಪಪ್ರಕಾಶದಲ್ಲಿ ಅತ್ಯಂತ ಶೋಭಾಯಮಾನವಾಗಿ ಕಾಣುತ್ತಲಿದ್ದವು. ಅವಳ ನೀಲವರ್ಣದ ರೇಶಿಮೆಯ ಸೂಕ್ಷ್ಮಮುಖಾವರಣದ ಮೇಲೆ ದೀಪಕಿರಣಗಳು ಬಿದ್ದು, ಬಹು ಚಂದವನ್ನುಂಟುಮಾಡಿದ್ದವು. ಅವಳ ಕಪೋಲಗಳು ಉಜ್ವಲವಾದ ಕೆಂಪು ವರ್ಣವನ್ನು ಧರಿಸಿದ್ದವು. ಶಿಕಂದರನು ಅಪ್ಸರೋಪಮಳಾದ ಈ ರಮಣಿಯನ್ನು ನೋಡಿದನು. ಅತ್ಯಂತ ಆಶ್ಚರ್ಯಾನ್ವಿತನಾದನು.

ಆ ಸ್ತ್ರೀಯು ಶಿಕಂದರನನ್ನು ನೋಡಿದಳು. ಪರಸ್ಪರರ ಏಕದೃಷ್ಟಿಯಾಯಿತು. ಲಜ್ಜೆಯಿಂದ ಅವಳ ಗಲ್ಲಗಳು ಆರಕ್ತವಾದವು. ಅವಳ ಆ ನೋಟದಲ್ಲಿ ನಾಚಿಕೆಯೂ, ಆಶ್ಚರ್ಯವೂ ವ್ಯಕ್ತವಾಗುತ್ತಲಿತ್ತು. ಶಿಕಂದರನು ಆನಂದಭರದಿಂದ ತನ್ನಲ್ಲಿಯೇ—ಇವಳೇ ನನ್ನ ಆರಾಧ್ಯ ದೇವ

ತಿಯು. ಯಾವಳ ಚಿತ್ರವನ್ನು ನಾನಿದುವರೆಗೆ ಮೇಲಿಂದ ಮೇಲೆ ನೋಡಿ, ಆನಂದವನ್ನನುಭವಿಸುತ್ತಿದ್ದೆನೋ, ಆ ರಮಣಿಯು ಇಂದು ಪ್ರತ್ಯಕ್ಷ ದರ್ಶನವನ್ನು ಕೊಟ್ಟಳು. ನನ್ನ ಭಾಗ್ಯಕ್ಕೆ ಎಣೆಯಿಲ್ಲ! ಎಂದು ಅಂದುಕೊಂಡನು.

ಆ ರಮಣಿಯು ತನ್ನೆದುರಿಗೆ ಅಪರಿಚಿತನಾದ ಸೈನಿಕನೊಬ್ಬನು ಹೀಗೆ ಅಕಸ್ಮಾತ್ತಾಗಿ ಬಂದು ನಿಂತಿದ್ದನ್ನು ನೋಡಿ, ಹೆದರಲಿಲ್ಲ. ಚಿಟ್ಟನೇ ಚೀರಲಿಲ್ಲ. ಕೆಲಹೊತ್ತು ನಿಶ್ಚಲಳಾಗಿ ನಿಂತುಕೊಂಡು, ಶಿಕಂದರನನ್ನು ನೋಡಿದಳು. ತರುವಾಯ ತನ್ನ ಬಲಗೈಯಲ್ಲಿರುವ ಸುವರ್ಣಪಾತ್ರೆಯನ್ನು ಕೆಳಗಿಟ್ಟು, ಮುಖಾವರಣವನ್ನು ತುಸು ಸರಿಸಿದಳು. ಇದರಿಂದ ಶಿಕಂದರನಿಗೆ ಅವಳ ಮುಖವು ಹೆಚ್ಚು ಸ್ಪಷ್ಟವಾಗಿ ಕಾಣಿಸಹತ್ತಿತು. ಚಿತ್ರದರ್ಶನಮಾತ್ರದಲ್ಲಿ ಉನ್ಮತ್ತತೆಯನ್ನುಂಟುಮಾಡಿದ ಆ ರಮಣಿಯ ಸಜೀವ ಮೂರ್ತಿಯನ್ನವನು ಅನಿಮಿಷನೇತ್ರನಾಗಿ ನೋಡತೊಡಗಿದನು ಆ ರಮಣಿಯು ಕರ್ಕಶಸ್ವರದಿಂದ—"ನೀನು ಯಾರು? ಇಂತಹ ರಾತ್ರಿಯಲ್ಲಿ ಬಾದಶಹನ ಅಂತಃಪುರವನ್ನು ಕಳ್ಳನಂತೆ ಪ್ರವೇಶಿಸಿದ್ದೇಕೆ?" ಎಂದು ಕೇಳಿದಳು.

ಆ ಸ್ತ್ರೀಯ ತಿರಸ್ಕಾರಪೂರ್ಣವಾದ ಮಾತನ್ನು ಕೇಳಿ, ಶಿಕಂದರನು ಅಪ್ರತಿಭನಾದನು. ಅವನು ತುಸುಹೊತ್ತಿನವರೆಗೆ ಉತ್ತರ ಕೊಡದೆ, ಅವಳ ಮುಖವನ್ನು ಟಕಮಕನೋಡುತ್ತ ನಿಂತನು. ಅವಳ ಕಣ್ಣುಗಳು ಸಿಟ್ಟಿನಿಂದ ಉರಿಯುತ್ತಲಿದ್ದವು; ತುಟಿಯು ನಡುಗುತ್ತಲಿತ್ತು. ಗುಲಾಬೀವರ್ಣದ ಕಪೋಲವು ಕೆಂಪುಬಣ್ಣವನ್ನು ಧರಿಸಿತ್ತು.

ಕೆಲಹೊತ್ತಿನ ಮೇಲೆ ಶಿಕಂದರನು ಮೃದುಸ್ವರದಿಂದ—"ನೀವು ಯಾರು?" ಎಂದು ಕೇಳಿದನು.

ನನ್ನ ಹೆಸರು "ಗುಲಸಾನಾ" ನಾನು ದುರ್ಗಾಧಿಪತಿಯ ಹೆಂಡತಿಯು. ಈ ಮನೆಯ ಯಜಮಾನಿಯು. ಮಹಾರಾಣಿಯಾದ ನಾನು ನಿನಗೆ ಈಗಿಂದಿಗಲೇ ಇಲ್ಲಿಂದ ಹೊರಟು ಹೋಗುವದಕ್ಕೆ ಅಪ್ಪಣೆ

ಮಾಡುತ್ತೇನೆ. ನೀನು ನನ್ನ ಈ ಆಜ್ಞೆಯನ್ನು ಪಾಲಿಸದಿದ್ದರೆ, ಈ ನೆಲವು ನಿನ್ನ ರಕ್ತದಿಂದ ರಂಜಿತವಾಗುವದು.

ಶಿಕಂದರನು ಸಿಟ್ಟಿನಿಂದ—“ ನಿಮ್ಮ ಸೈನಿಕರು ಇಲ್ಲಿಗೆ ಬರ ದಂತೆ ಮಾಡಿಯೇ ನಾನಿಲ್ಲಿಗೆ ಬಂದಿದ್ದೇನೆ. ನಾನು ಸಾಮ್ರಾಟ ಅಕ ಬರಶಹನ ಸೇನಾಪತಿಯು. ನನ್ನ ಸಂಗಡ ಐದುಸಾವಿರ ಸೈನಿಕರಿರು ವರು. ದುರ್ಗಾಧಿಪತಿಯ ಬಳಿಯಲ್ಲಿ ಇಷ್ಟು ಸೈನ್ಯವಿಲ್ಲವೆಂಬದನ್ನು ನಾನು ಬಲ್ಲೆನು ” ಎಂದು ಹೇಳಿದನು.

ಶಿಕಂದರನ ಮಾತು ಕೇಳಿ, ಗುಲಸಾನೆಗೆ ಸಿಟ್ಟುಬಂದಿತು. ಅವಳು ತಿರಸ್ಕಾರದಿಂದ—“ಏನು, ನೀವು ಮೊಗಲ ಸೇನಾಪತಿಗಳೇ, ನಾನು ಮೊಗಲ ಸೇನಾಪತಿಗಳನ್ನು ಅರಿಯದವಳೆಂದಲ್ಲ! ಹಿಂದೆ ಜಹಾಂವರಬೇಗನೆಂಬುವನು ಬಂದಿದ್ದನು. ನೀವೂ ಅದೇವರ್ಗದವರು. ಅವನು ಒಂದುದಿನ ಕಳ್ಳನಂತೆ ನನ್ನ ಈ ಅಂತಃಪುರವನ್ನು ಪ್ರವೇಶಿಸಲು ಪ್ರಯತ್ನ ಮಾಡಿದ್ದನು. ಅಂತೆಯೇ ನೀವೂ ಇಂದು ಯತ್ನಮಾಡಿರುವಿರಿ. ಮೊಗಲ ಸೇನಾಪತಿಗಳು ಹೀಗೆ ಮಾಡಿಯೇ ಶತ್ರು ಗಳನ್ನು ಗೆಲ್ಲುತ್ತಿರುವಂತೆ ತೋರುತ್ತದೆ! ನಿಮ್ಮ ಆಕೃತಿಯನ್ನು ನೋಡಿದರೆ, ನೀವು ಶ್ರೇಷ್ಠ ಕುಲದಲ್ಲಿ ಹುಟ್ಟಿದವರೆಂಬಂತೆ ತೋರು ತ್ತದೆ. ಮುಖವನ್ನು ನೋಡಲಾಗಿ ಸೇನಾಪತಿಗಳಿಗುಚಿತವಾದ ಉದಾರ ಗುಣವು ನಿಮ್ಮಲ್ಲಿರುವಂತೆ ತೋರುತ್ತದೆ. ಸಾಹೇಬ, ನೀವು ಈಗ ನಿಮ್ಮ ಆ ಉದಾರಗುಣವನ್ನು ಮನಸ್ಸಿನಲ್ಲಿ ತಂದು, ಈಗಲೇ ಹೊರಟು ಹೋಗಿರಿ. ಸಾಹಸವು ನಿಮ್ಮಲ್ಲಿದ್ದರೆ, ಹೊರಗೆನಿಂತು ಕೋಟೆಯನ್ನು ಮುತ್ತಿರಿ. ಪಠಾಣರ ಶಕ್ತಿಯ ಪರೀಕ್ಷೆ ಮಾಡಿರಿ. ಮೊಗಲರ ವೀರತ್ವ ವನ್ನು ಪ್ರಕಟಮಾಡಿರಿ” ಎಂದು ಅಂದಳು.

ಭಯರಹಿತಳೂ, ದರ್ಪಿತಳೂ ಆದ ಗುಲಸಾನೆಯ ತಿರಸ್ಕಾರ ದಿಂದ ಶಿಕಂದರನು ಲಜ್ಜಿತನಾದನು. ಅವನು ತನ್ನಲ್ಲಿಯೇ ಅಂದು ಕೊಂಡನು—ಎಂಥ ಅಪರೂಪರೂಪವಿದು! ಇವಳ ರೂಪವನ್ನು ನೋಡಿ, ನಾನು ಉನ್ಮತ್ತನಾಗಿ ಹೋಗಿದ್ದೇನೆ. ಇವಳು ನನ್ನ ಜೀವಿತದ ಆಧಾ

೪ು. ಈ ವರೆಗೆ ಇವಳ ಆರಾಧನೆಯಲ್ಲಿ ಕಾಲಕಳೆದೆನು. ಇನ್ನು ಇವ
ಳನ್ನು ಬಿಟ್ಟು ಹೋಗಲಾರೆನು. ಇಷ್ಟು ದಿವಸಗಳವರೆಗೆ ದರ್ಶನಾ
ಕಾಂಕ್ಷೆಯಿಂದ ತಳಮಳಗೊಳ್ಳುತ್ತಲಿದ್ದೆನು. ಇಂದು ಆ ವಸ್ತುವು ತಾನೇ
ತಾನಾಗಿ ನನ್ನೆದುರಿಗೆ ಬಂದು ನಿಂತಿದೆ. ಈ ಪ್ರಸಂಗದಲ್ಲಿ ನಾನು ಇವ
ಳನ್ನು ತ್ಯಜಿಸಿಬಿಡುವದು ಹೇಗೆ? ಬಾದಶಹನು ನನಗೊಂದು ಕೆಲಸ
ವನ್ನು ಹೇಳಿದ್ದಾನೆ. ನಾನು ಮಾನ ಸಂಭ್ರಮಗಳ ಆಶೆಯಿಂದ
ಅದನ್ನು ಮಾಡಲಿಕ್ಕೆ ಒಡಂಬಟ್ಟಿದ್ದೇನೆ. ಆದರೆ ಇಂದು ಆ ಮಾನ-
ಗೌರವಗಳ ಕಡೆಗೆ ನನ್ನ ಲಕ್ಷವಿಲ್ಲ. ಈ ಸುಂದರಿಯನ್ನು ಕೈವಶ
ಮಾಡಿಕೊಳ್ಳುವದೂ, ಇವಳೊಡನೆ ಸುಖದಿಂದಿರುವದೂ ನನ್ನ ಲಕ್ಷವು.
ನಾನು ಹೀಗೆ ಮಾಡಿದರೆ ಕರ್ತವ್ಯಭ್ರಷ್ಟನಾದಂತಾಗುವದು; ಆದರೆ
ಇದಕ್ಕೆ ನನ್ನ ಉಪಾಯವಿಲ್ಲ. ನನ್ನ ಈ ಅಪರಾಧಕ್ಕೆ ಬಾದಶಹನು
ದೇಹಾಂತಶಿಕ್ಷೆಯನ್ನು ವಿಧಿಸಿದರೆ ವಿಧಿಸಲಿ. ಮುಂದೆ ನಾನದನ್ನು
ಸಂತೋಷದಿಂದ ಅನುಭೋಗಿಸುವೆನು. ಆದರೆ ಇಂದು ಇವಳ ಸಮಾ
ಗಮದ ಆಶೆಯನ್ನು ಬಿಡಲಾರೆನು! ದೇವಾ, ನೀನು ಈ ಸೃಷ್ಟಿ
ಯಲ್ಲಿ ಇಂತಹ ಲಾವಣ್ಯಮಣಿಯನ್ನೇಕೆ ಸೃಷ್ಟಿಸಿದೆ? ದರ್ಶನ
ಮಾತ್ರದಿಂದ ಪಾಪವಾಸನೆಯನ್ನುಂಟುಮಾಡುವ—ಧರ್ಮಪ್ರವೃತ್ತಿ
ಯನ್ನು ಶಿಥಿಲಗೊಳಿಸುವ-ಕರ್ತವ್ಯಹೀನನನ್ನಾಗಿ ಮಾಡುವ ರೂಪವು
ನಿನ್ನ ಈ ಶಾಂತಿಮಯ ಸಂಸಾರದಲ್ಲಿರತಕ್ಕದ್ದು ಯೋಗ್ಯವೇ? ಮಾನ
ವನ ಸತ್ವಪರೀಕ್ಷೆಗಾಗಿ ನೀನು ಈ ಆಟವನ್ನು ಹೂಡಿರಬಹುದೇನು?

ಶಿಕಂದರನು ಉತ್ತರಕೊಡದಿರುವದನ್ನು ನೋಡಿ ಗುಲಸಾ
ನೆಯು ಮೃದುಸ್ವರದಿಂದ ಮೊಗಲ ಸೇನಾಪತಿ, ಕೃತಕರ್ಮಕ್ಕಾಗಿ ನಿಮಗೆ
ಪಶ್ಚಾತ್ತಾಪವಾದಂತೆ ತೋರುತ್ತದೆ. ಈ ಅನುತಾಪದಿಂದ ಮನಸ್ಸು
ಶುದ್ಧವಾಗಿರಬಹುದು. ವೀರಪುರುಷರಾದ ನೀವು ಒಡೆಯನ ಮನಸ್ತು
ಷ್ಟಿಗಾಗಿ ನೀಚಪ್ರವೃತ್ತಿಗೊಳಗಾದದ್ದು ಹೇಯವಾದದ್ದೆಂಬದರಲ್ಲಿ ಸಂದೇಹ
ವಿಲ್ಲ. ವಿಚಾರಮಾಡಿರಿ. ಸುವರ್ಣಭೂಮಿಯಾದ ಈ ಹಿಂದುಸ್ತಾನವು
ಅಕಬರನ ಮನೆಯ ಸೊತ್ತಲ್ಲ. ಇದನ್ನವನಿಗೆ ಯಾರೂ ಬರಕೊಟ್ಟಿಲ್ಲ-

ಯಾವನು ಬಲಶಾಲಿಯೋ ಅವನು ಇದರ ಸ್ವಾಮಿತ್ವವನ್ನು ಹೊಂದುವನು. ನಿಮ್ಮ ಯಜಮಾನನು ತನ್ನ ಬಾಹುಬಲದಿಂದ ಕೆಲವು ಪ್ರದೇಶಕ್ಕೆ ಒಡೆಯನಾಗಿರುವಂತೆ, ನನ್ನ ಪತಿಯು ಈ ರಾಜ್ಯದ ಅಧೀಶ್ವರನು. ದಿಲ್ಲಿಯ ರಾಜ್ಯದಲ್ಲಿ ಅಕಬರನಿಗಿರುವಷ್ಟು ಅಧಿಕಾರವು, ಈ ರಾಜ್ಯವಲ್ಲಿ ನನ್ನ ಪತಿಗೆ ಅದೆ. ಹೀಗಿರಲು ಅಕಬರನು, ಈ ರಾಜ್ಯವನ್ನು ಕಸಿದುಕೊಳ್ಳುವದಕ್ಕಾಗಲಿ, ನನ್ನ ಪ್ರಾಣನಾಥನನ್ನು ಸೆರೆಹಿಡಿಯುವದಕ್ಕಾಗಲಿ ಯಾಕೆ ಪ್ರಯತ್ನಿಸಬೇಕು? ಒಂದುವೇಳೆ ಮಹತ್ವಾಕಾಂಕ್ಷೆಯು ಅವನನ್ನು ಸುಮ್ಮನೆ ಕೂಡಗೊಡದಿದ್ದರೆ, ಎದುರಿನಲ್ಲಿನಿಂತು ಯುದ್ಧಮಾಡಬೇಕು. ತನ್ನ ಭುಜಬಲದ ತಿಂಡಿಯನ್ನು ತೀರಿಸಿಕೊಳ್ಳಬೇಕು; ಅಲ್ಲದೆ ವಂಚನೆಯಿಂದ ಒಬ್ಬನ ರಾಜ್ಯವನ್ನು ಎತ್ತಿಹಾಕಲಿಕ್ಕೆ ಯತ್ನಿಸುವದು ನಿಂದ್ಯವಲ್ಲವೇ? ಈಗ ನೀವು ಸುಮ್ಮನೆ ಹೋಗಿಬಿಡಿರಿ. ವೀರರಿಗೆ ಉಚಿತವಾದಂತೆ ಕೆಲಸಮಾಡಿರಿ. ನಿಮಗೆ ಈ ಗುಪ್ತಮಾರ್ಗವನ್ನು ಯಾರು ತೋರಿಸಿಕೊಟ್ಟರೆಂಬದನ್ನು ನಾನು ಬಲ್ಲೆನು. ಆ ದುಷ್ಟೆಯಾದ ಕುಲಸಮುಳ, ಅವಳ ಗಂಡನಾದ ವೃದ್ಧ ಸೇಖಜಿಯ ರುಂಡಗಳನ್ನು, ನಾಳಿನದಿವಸ ಕೋಟೆಯ ಗೋಡೆಯಮೇಲಿರಿಸಿ, ಮೆರಿಸುವೆನು! ಎಂದು ಹೇಳಿದಳು.

ಶಿಕಂದರನ ಲಕ್ಷವು ಈ ಮಾತುಗಳಕಡೆಗಿರಲಿಲ್ಲ. ಅವನುಗುಲಸಾನೆಯ ಭುವನಮೋಹನ ರೂಪವನ್ನು ನೋಡಿ, ಆನಂದಿಸುತ್ತಲಿದ್ದನು. ವೀಣಾವಿನಿಂದಿತವಾದ ಅವಳ ಇಂಪಾದಸ್ವರವನ್ನು ಕೇಳಿ, ತೃಪ್ತಿಹೊಂದುತ್ತಲಿದ್ದನು. ಅದರಿಂದವನು ಯಾವಉತ್ತರವನ್ನೂ ಕೊಡಲಿಲ್ಲ. ಇದನ್ನು ನೋಡಿ, ಗುಲಸಾನೆಯು ಸಿಟ್ಟಿನಿಂದ—" ನಾನು ಇಲ್ಲಿ ಬಹಳ ಹೊತ್ತುನಿಲ್ಲಲಾರೆನು. ಪತಿಯು ನನ್ನ ಹಾದೀನೋಡುತ್ತ ಕುಳಿತಿರಬಹುದು. ನಾನು ಅವನ ಅಪ್ಪಣೆಯಿಂದ ಮದಿರೆಯನ್ನು ತೆಗೆದುಕೊಂಡು ಹೋಗುವದಕ್ಕೆ ಬಂದಿದ್ದೆನು. ನೀವು ಕೂಡಲೆ ಹೋಗಿ ಬಿಡಿರಿ. ಪರಸ್ತ್ರೀಯಳ ಕಡೆಗೆ ಈ ಮೇರೆಗೆ ನಿರ್ಲಜ್ಜತನದಿಂದ ನೋಡುತ್ತನಿಂತುಕೊಳ್ಳುವದು ವೀರರಿಗೆ ಭೂಷಣವಾದದ್ದಲ್ಲ!" ಎಂದು ಅಂದಳು.

ಶಿಕಂದರನು ತನ್ನ ಉನ್ಮತ್ತತೆಯಿಂದ ಹಿಂಜರಿಯಲಿಲ್ಲ. ಅವನು

ಗುಲಸಾನೆಯ ಸಮೀಪಕ್ಕೆ ಹೋಗಿ ಪ್ರೇಮಪೀಡಿತಸ್ವರದಿಂದ—ಸುಂದರಿ, ದೇವರಸೃಷ್ಟಿಯಲ್ಲಿ ನೀನು ಅಪೂರ್ವವಾದ ವಸ್ತುವು!" ಎಂದು ಅಂದನು.

ವೀರನೆ, ದೇವರದಯೆಯಿಂದ ನಾನು ಸುಂದರಿಯಾಗಿರುವದು ನಿಜವು. ಅಂತೆಯೇ ನೀವು ವೀರಪುರುಷರಾಗಿರುವಿರಿ ಇದರಲ್ಲಿ ಹೊಟ್ಟೆಕಿಚ್ಚಿಗೆ ಆಸ್ಪದವಿಲ್ಲ. ಈಗ ನೀವು ಸುಮ್ಮನೆ ಕಾಲಕಳೆಯುತ್ತ ನಿಲ್ಲಬೇಡಿರಿ ರೂಪವನ್ನು ನೋಡುವ ಸಮಯವಿದಲ್ಲ! ನಾನು ಈ ರಾಜ್ಯದಅಧೀಶ್ವರಿಯು. ನೀವು ಕೂಡಲೇ ಹೊರಟುಹೋಗಬೇಕೆಂದೂ, ಇಲ್ಲದಿದ್ದರೆ ವಿಪತ್ತಿಗೊಳಗಾಗುವಿರೆಂದೂ ಹೇಳುತ್ತೇನೆ. ಬೇರೆ ಮಾತಾಡದೆ ಹೊರಡಿರಿ. ಪ್ರಬಲವಾದ ಇಚ್ಛೆಯು ನಿಮಗಿದ್ದರೆ, ನನ್ನ ಪತಿಯ ಮಿತ್ರರಾಗಿ, ಮತ್ತೆ ಯಾವಾಗಲಾದರೂ ಬರ್ರಿ. ನನ್ನ ಸತ್ಕಾರವನ್ನು ಸ್ವೀಕರಿಸಿರಿ. ನಾನು ಕೈ ಮುಟ್ಟಿ ಕೊಟ್ಟಮದ್ಯವನ್ನು ಸ್ವೀಕರಿಸಿ, ತೃಪ್ತಿಹೊಂದಿರಿ.

ಶಿಕಂದರನು ಉನ್ಮತ್ತನಾಗಿಹೋಗಿದ್ದನು; ಸಾರಾಸಾರವಿಚಾರವನ್ನು ಕಳೆದುಕೊಂಡು ಬಿಟ್ಟಿದ್ದನು. ಅವನು ಆವೇಗಭರದಿಂದ—“ ಸುಂದರಿ, ಇಷ್ಟೊಂದು ರೂಪವೈಭವವನ್ನು ತಿಳಿದುಕೊಂಡು ಅವತರಿಸಿದ ನೀನು ಈ ಮೇರೆಗೆ ನಿಷ್ಠುರಳಾಗುವದು ಯೋಗ್ಯವಲ್ಲ! ನೀನು ನನ್ನಹೃದಯದ ಆರಾಧ್ಯದೇವತೆಯು. ಈ ವರೆಗೆ ನಾನು ನಿನ್ನ ತದೇಕಧ್ಯಾನದಲ್ಲಿ ಕಾಲಕಳೆದು, ಇಂದು ನಿನ್ನ ದರ್ಶನಲಾಭವನ್ನು ಹೊಂದಿದೆನು. ಇಗೋನೋಡು. ನಿನ್ನ ಚಿತ್ರವನ್ನು ಇದುವರೆಗೆ ಆರಾಧಿಸುತ್ತ ಬಂದಿದ್ದೇನೆ. ಇಂದು ದೇವರದಯೆಯಿಂದ ನಮ್ಮ—ನಿಮ್ಮ ಮಿಲನವಾಯಿತು. ಇಂದು ಸಾವಕಾಶವಾಗಿ ನಿನ್ನ ರೂಪ ಸೌಷ್ಟವವನ್ನು ನೋಡಿ, ತೃಪ್ತಿಹೊಂದಬೇಕೆಂದು ಮಾಡಿದ್ದೇನೆ. ನೀನು ನನ್ನ ಈ ಇಚ್ಛೆಗೆ ಪ್ರತಿಬಂಧ ಮಾಡಬೇಡ, ಅಂದನು.

“ ಏನಂದಿರಿ? ನನ್ನ ಚಿತ್ರವು ನಿಮ್ಮ ಬಳಿಯಲ್ಲಿ ಅದೆಯೇ? ಅದನ್ನು ನೀವೆಲ್ಲಿದೊರಕಿಸಿದಿರಿ.

ಶಿಕಂದರನು ತನ್ನ ಬಳಿಯಲ್ಲಿರುವ ಚಿತ್ರವನ್ನು ಗುಲಸಾನೆಯ ಎದುರಿಗೆ ಹಿಡಿದು—ಇದು ನೋಡು, ನಿನ್ನ ಚಿತ್ರವು. ನಾನು ಸುಳ್ಳು

ಹೇಳುವನೆಂದು ತಿಳಿದಿರುವಿಯೇನು? ಎಂದು ಅಂದನು.

ಗುಲಸಾನೆಯು ದೀಪದ ಸಹಾಯದಿಂದ ಚಿತ್ರವನ್ನು ನೋಡಿ,— “ ಇದು ನನ್ನ ಚಿತ್ರವು ಅಹುದು. ನಾನು ಇದನ್ನು ಐದು ಒದಿಕೆಗಳಿಗೆ ಮಾರಬೇಕೆಂದು ಹೇಳಿ ನನ್ನ ಒಬ್ಬ ದಾಸಿಯ ಕೈಯಲ್ಲಿಕೊಟ್ಟಿದ್ದೆನು. ಈ ಕರಾರಿನಿಂದ ಈ ಚಿತ್ರವನ್ನು ಯಾರೂ ತೆಗೆದುಕೊಳ್ಳಲಿಕ್ಕಿಲ್ಲೆಂದು ನಾನು ಎಣಿಸಿದ್ದೆನು. ನೀವು ಅವಳಿಂದ ಈ ಚಿತ್ರವನ್ನು ಮಾರಲಿಕ್ಕೆ ತೆಗೆದುಕೊಂಡಂತೆ ತೋರುತ್ತದೆ. ಕರಾರಿನಂತೆ ಒದಿಕೆಗಳು ಈಗ ಬೇಕೇನು? ಎಂದು ಅಂದಳು.

ಶಿಕಂದರನು ವಿಕಾರಗ್ರಸ್ತವಾದ ರೋಗಿಯಂತೆ ಜಡಿತಸ್ವರದಿಂದ— “ ಮನೋಹರೆ, ಕುಸುಮಕೋಮಲವಾದ ನಿನ್ನ ಹಸ್ತವನ್ನು ಕೊಡು. ಅದನ್ನು ಚುಂಬಿಸಿ ಕೃತಾರ್ಥನಾಗುವೆನು, ” ಎಂದು ಹೇಳಿದನು.

ಗುಲಸಾನೆಯು ತಿರಸ್ಕಾರದಿಂದ ದೂರಸರಿದು ನಿಂತು— “ ನೀವು ಬಹಳ ನಿರ್ಲಜ್ಜರಿರುವಂತೆ ತೋರುತ್ತದೆ. ಪತಿವ್ರತೆಯ ಬಳಿಯಲ್ಲಿ ಈತರದ ಮಾತಾಡುವದಕ್ಕೆ ನಿಮಗೆ ನಾಚುಕೆಯಿಲ್ಲವೆ? ಪತಿಯ ಹೊರತು ನನ್ನ ಕೈಯನ್ನು ಚುಂಬಿಸುವ ಅಧಿಕಾರವು ಅನ್ಯರಿಗೆ ಇಲ್ಲ. ಈ ರಾತ್ರಿಯಲ್ಲಿ ಬಂದು, ಈಮೇರೆಗೆ ಮರ್ಯಾದೆಹೀನತೆಯಿಂದ ಮಾತಾಡುವ ನಿಮ್ಮ ಅಪರಾಧವು ಅಂತಿಂಥದಲ್ಲ! ಸೇವಕರನ್ನು ಕರೆದು, ನಿಮ್ಮ ಶಿರಚ್ಛೇದಮಾಡಿಸುವೆನು ! !

ಶಿಕಂದರನು ಮೊಣಕಾಲುಗಳನ್ನೂರಿ ಕುಳಿತು, ಕಾತರ ಸ್ವರದಿಂದ ಅಂದದ್ದು— “ ಸುಂದರಿ, ನಿರ್ದಯಳಾಗಬೇಡ. ನಿನ್ನ ರೂಪಕ್ಕೆ ಮೋಹಿತನಾದ ನಾನು ಮಹತ್ವದ ಕರ್ತವ್ಯವನ್ನು ಮರೆತುಬಿಟ್ಟಿದ್ದೇನೆ. ಪ್ರಸನ್ನಳಾಗು. ”

ಗುಲಸಾನೆಯು ತನ್ನಲ್ಲಿರುವ ತೀಕ್ಷ್ಣವಾದ ಚೂರಿಯನ್ನು ಹೊರತೆಗೆದು— “ ನಾನು ಮೊಗಲ ಜಾತಿಯವಳಲ್ಲ; ಪಠಾಣರ ರಮಣಿಯು. ನೀವು ಭ್ರಾಂತರಾಗಿರುವಿರಿ! ನೀವು ನಿಮ್ಮ ಯಜಮಾನನು ಒಪ್ಪಿಸಿದ ಕೆಲಸವನ್ನು ಮರೆತುಬಿಟ್ಟಿದ್ದೀರಿ; ಆದರೆ ನಾನು ಪತಿಯ ವಿಷಯದ ನನ್ನ

ಕರ್ತವ್ಯವನ್ನು ಮರೆಯಲಾರೆನು! ಇನ್ನು ನೀವು ಅಪ್ರಾಸಂಗಿಕರೀತಿ ಯಿಂದ ಪುನಃ ಬಂದಂತೆ ಮಾತಾಡಿದರಾದರೆ, ನನ್ನ ಈ ಚೂರಿಯು ನಿಮ್ಮನ್ನು ಕೊಂದುಬಿಡುವದು!" ಎಂದು ಹೇಳಿದಳು.

ಗುಲಸಾನೆಯ ಈ ತಿರಸ್ಕಾರದಿಂದ ಶಿಕಂದರನ ಮೋಹವು ತುಸು ಮಟ್ಟಿಗೆ ನಾಶವಾಯಿತು. ಅವನು ಕರ್ತವ್ಯವನ್ನೂ, ಆತ್ಮಸನ್ಮಾನವನ್ನೂ ನೆನೆದು, ವಿವೇಕವನ್ನು ತಂದುಕೊಂಡನು. ಗುಲಸಾನೆಯು ಸಹಜವಾಗಿ ತನ್ನ ಮಾತಿಗೆ ಒಪ್ಪಿಕೊಳ್ಳುವದಿಲ್ಲೆಂದು ಭಾವಿಸಿದನು. ದುರ್ಗಾಧಿಪತಿ ಯನ್ನು ಸೆರೆ ಹಿಡಿದಬಳಿಕ ಗುಲಸಾನೆಯು ಸಹಜವಾಗಿ ತನ್ನ ಆಧೀನ ಕ್ಕೊಳಗಾಗುವಳೆಂದು ಯೋಚಿಸಿ, ಅನರಂತೆ ಮಾಡುವದನ್ನು ಗೊತ್ತುಮಾ ಡಿಕೊಂಡನು. ಅವನು ಕೂಡಲೇ ಮೆಲ್ಲನೆ ಕೊಳಲು ಊದಿದನು. ಶಸ್ತ್ರ ಧಾರಿಗಳಾದ ಹತ್ತುಮಂದಿ ಸೈನಿಕರು ಶಿಕಂದರನ ಬಳಿಗೆ ಬಂದರು.

ಗುಲಸಾನೆಯು ಮೊಗಲಸೈನಿಕರನ್ನು ನೋಡಿ, ತುಸುಭೀತಳಾದಳು. ತುಸುಹೊತ್ತಿನಲ್ಲಿ ಮತ್ತೆ ಧೈರ್ಯವನ್ನು ತಂದುಕೊಂಡು,—" ಸೇನಾಪತಿ, ನೀನು ಈ ಸೈನಿಕರಸಹಾಯದಿಂದ ನನ್ನ ಪತಿಯನ್ನು ಸೆರೆಹಿಡಿದು ಒಯ್ಯ ಬೇಕೆಂದು ಮಾಡಿರುವಿಯಷ್ಟೇ? ನನ್ನ ದೇಹದಲ್ಲಿ ಪ್ರಾಣವಿರುವವರೆಗೆ ನಾನು ಈ ಕೆಲಸವನ್ನು ಮಾಡಗೊಡಲಿಕ್ಕಿಲ್ಲೆಂಬದನ್ನು ಮರೆಯಬೇಡಿರಿ," ಎಂದು ಅಂದಳು.

ಸುಂದರಿ, ಐನೂರು ಸೈನಿಕರು ಈ ಕೋಟೆಯನ್ನು ಮುತ್ತಿದ್ದಾರೆ. ಐನೂರುಜನರು ಗುಡ್ಡದ ಅಡಿಯಲ್ಲಿ ನಿಂತಿರುವರು. ಈ ಪ್ರಸಂಗದಲ್ಲಿ ನೀನು ಸಾಹಸಕ್ಕೊಳಗಾಗುವದು ವ್ಯರ್ಥವು. ಸುಮ್ಮನೆ ನಾನು ಹೇಳಿ ದಂತೆ ಕೇಳುವದು ಹಿತಕರವು.

ಗುಲಸಾನೆಯ ಮುಖವು ಬಾಡಿತು. ಆದರೂ ಅವಳು ಸಾಹಸ ವನ್ನು ತಂದುಕೊಂಡು— " ಸೇನಾಪತಿ, ನನಗೆ ವೈಧವ್ಯವನ್ನು ತಂದಿ ಡುವದು ದೇವರ ಇಚ್ಛೆಯಾಗಿದ್ದರೆ, ಅದನ್ನು ನಾನು ಹೇಗೆ ತಪ್ಪಿಸಬ ಲ್ಲೆನು? ನೀವು ಸಾಹಸಿಗಳಾದ ವೀರರು. ದಿಲ್ಲಿಯ ಬಾದಶಹನ ಸೇನಾ ಪತಿಗಳು. ಉದಾರತೆಯಿಂದ ವರ್ತಿಸುವದು ನಿಮಗೆ ಭೂಷಣವಾದದ್ದು.

ಕ್ಷುದ್ರ ಹೆಂಗಸು ನಾನು! ನಾನು ನಿಮಗೆ ಹೆಚ್ಚಿಗೆ ಹೇಳಬೇಕೆಂಬ ಹಾಗೇನೂ ಇಲ್ಲ. ನೀಚಜನರಿಗುಚಿತವಾದ ವಿಶ್ವಾಸಘಾತುಕತನದಿಂದ ನೀವು ವರ್ತಿಸುವಿರಾದರೆ, ಕಲಂಕವನ್ನು ಹೊಂದುವಿರಿ. ಇದಕ್ಕಾಗಿ ಜನರು ನಿಮ್ಮನ್ನು ತಿರಸ್ಕರಿಸದೆ ಇರಲಾರರು. ನೀವು ನನ್ನ ಚಿತ್ರವನ್ನು ನೋಡಿ, ಮೋಹಿತರಾಗಿ ಹೋಗಿರುವಿರಷ್ಟೇ? ಇದುವರೆಗೆ ನನ್ನ ಆರಾಧನೆಯನ್ನು ಮಾಡಿರುವಿರಷ್ಟೇ? ನನ್ನಲ್ಲಿ ಆ ಯೋಗ್ಯತೆ ಇರಲಿ, ಇಲ್ಲದಿರಲಿ, ಆ ಮಾತುಬೇರೆ. ಮೋಹಿತರಾಗಿರುವದೇ ನಿಜವಿದ್ದರೆ, ನನ್ನದೊಂದು ಕ್ಷುದ್ರಮಾತನ್ನು ನಡೆಸಲಾರಿರಾ? ಈಗ ನನ್ನ ಪತಿಯು ಅಳತೆಗೆಟ್ಟು ಸೆರೆಕುಡಿದು, ಎಚ್ಚರದಪ್ಪಿದ್ದಾನೆ. ಇಂದು ರಾತ್ರಿ ನೀವು ಅವನನ್ನು ಹಿಡಿಯಲಾಗದು. ನಮ್ಮ ಸೈನಿಕರು ಪಟ್ಟಣದಲ್ಲಿದ್ದಾರೆ. ಅವರಿಗೆ ಈ ಸುದ್ದಿಯು ತಿಳಿದಿಲ್ಲ. ನಿಮ್ಮ ಸೈನಿಕರು ಕೋಟೆಯನ್ನು ಪ್ರವೇಶಿಸಿಬಿಟ್ಟಿದ್ದಾರೆ. ಅಂದಬಳಿಕ ನಿಮಗೆ ಹೆದರಿಕೆಯಲ್ಲಿಯದು? ನಾಳೆ ಮುಂಜಾವಿನಲ್ಲಿ ನೀವು ನನ್ನ ಪತಿಯೊಡನೆ ದ್ವಂದ್ವಯುದ್ಧಮಾಡಿರಿ. ಅವನನ್ನು ಸೋಲಿಸಿರಿ. ಸೆರೆಹಿಡಿದುಕೊಂಡು ಹೋಗಿರಿ. ಇದರಿಂದ ನಿಮ್ಮ ಕೀರ್ತಿಯು ಹೆಚ್ಚಾಗುವದು," ಎಂದು ಹೇಳಿದಳು.

ಸುಂದರಿ, ನಾನು ನಿನ್ನ ಹೇಳಿಕೆಯಂತೆ ನಡೆಯಲಾರೆನು. ನಾನು ಬಾದಶಹನ ವಿಶ್ವಾಸಿಕ ಚಾಕರನು. ವಿಶ್ವಾಸಘಾತವನ್ನೆಂದೂ ಮಾಡಲಾರೆನು. ಇಂದು ಅನಾಯಾಸವಾಗಿಯೇ ಸುಸಂಧಿಯನ್ನು ಹೊಂದಿದ್ದೇನೆ. ಈ ರಾತ್ರಿಯಲ್ಲಿಯೇ ಸೋಣಾನಿಯನ್ನು ಹಿಡಿದುಕೊಂಡು ಹೋಗುವೆನು.

ಗುಲಸಾನೆಯ ಮುಖವು ಕಪ್ಪಿಟ್ಟಿತು. ಅವಳು ಭಯದಿಂದ ತುಸು ಹೊತ್ತು ಸುಮ್ಮನೆ ನಿಂತುಕೊಂಡಳು. ಕೆಲಹೊತ್ತಿನಮೇಲೆ ಧೈರ್ಯವನ್ನು ತಂದುಕೊಂಡು— " ಮೊಗಲವೀರ, ಪಠಾಣರು ವಿಶ್ವಾಸಿಗಳನ್ನು ಪ್ರೀತಿಸುತ್ತಿರುವರು. ಬಾದಶಹನೊಡನೆ ವಿಶ್ವಾಸಘಾತುಕರೀತಿಯಿಂದ ನಡಕೊಳ್ಳಲಾರೆನೆಂದು ಹೇಳಿದ ನಿಮ್ಮ ಮಾತು ಕೇಳಿ, ನನಗೆ ತುಂಬಾ ಆನಂದವಾಯಿತು. ಈವರೆಗೆ ನಿಮ್ಮ ಪರೀಕ್ಷೆಗೋಸುಗ ಹಾಗೆ ಮಾತಾಡಿ

ದೆಸು. ನನ್ನ ಪತಿಯ ಸುಖದ ದಿವಸಗಳು ಇಂದಿಗೆ ಮುಗಿದವೆಂದು ನನಗೆ ತೋರುತ್ತದೆ. ನಾಳೆ ಬೆಳಗಿನಲ್ಲಿಯೇ ಈ ದುರ್ಗದ ಮೇಲೆ ಪಠಾಣರ ನೀಲವರ್ಣದ ಪತಾಕೆಯ ಬದಲು, ಮೊಗಲರ ಕೆಂಪುವರ್ಣದ ನಿಶಾನೆಯು ಹಾರಾಡತೊಡಗುವದು. ಸೇನಾಪತಿ, ನಿಮ್ಮ ಈವರೆಗಿನ ಮಾತುಗಳಿಂದ ನೀವು ರಾಜನಿಷ್ಠರೂ, ಕರ್ತವ್ಯಪರಾಯಣರೂ ಆಗಿರುವಿರೆಂದು ನನಗೆ ತೋರುತ್ತದೆ. ಈ ರಾಜ್ಯದ ಅಧೀಶ್ವರಿಯ ಸಂಕಟ ಸಮಯದ ಒಂದು ಸಾಮಾನ್ಯ ಬೇಡಿಕೆಯನ್ನು ಈ ಪ್ರಸಂಗದಲ್ಲಿ ನೀವು ಪೂರ್ಣಮಾಡಲು ಸಮರ್ಥರಿಲ್ಲವೆ? " ಎಂದು ಅಂದಳು.

ತರುವಾಯ ಗುಲಸಾನೆಯು ದೀಪವನ್ನು ಕೆಳಗಿಟ್ಟು, ಮೊಣಕಾಲೂರಿ ಕುಳಿತು ಕೈಜೋಡಿಸಿ, ದೀನವಾಣಿಯಿಂದ— " ಸೇನಾಪತಿ, ಅಬಲೆಯರಿಗೆ ಪತಿಯೇ ಆರಾಧ್ಯದೇವರು. ಪತಿವ್ರತೆಯು ತನ್ನ ಗಂಡನ ಪ್ರಾಣರಕ್ಷಣೆಗಾಗಿ, ಏನು ಬೇಕಾದದ್ದನ್ನು ಮಾಡಬಲ್ಲಳು. ನಾನು ನನ್ನ ಅಭಿಮಾನವನ್ನೂ, ಗೌರವವನ್ನೂ ಮರೆತು, ನಿಮ್ಮನ್ನು ಅಂಗಲಾಚಿ ಬೇಡಿಕೊಳ್ಳುತ್ತಿದ್ದೇನೆ. ಬೊಕ್ಕಸದಲ್ಲಿರುವ ಹಣವೂ, ಮುತ್ತುರತ್ನಾಲಂಕಾರಗಳೂ ನಿಮ್ಮವು. ಅವನ್ನು ನೀವು ತೆಗೆದುಕೊಳ್ಳಿರಿ. ಈ ರಾಜ್ಯವನ್ನು ತೆಗೆದುಕೊಳ್ಳಿರಿ. ನಾನಾಗಲಿ, ನನ್ನ ಸೈನಿಕರಾಗಲಿ ನಿಮಗೆ ಪ್ರತಿಬಂಧ ಮಾಡುವದಿಲ್ಲ. ಒಂದು ಹನಿ ರಕ್ತಪಾತವಿಲ್ಲದೆ, ನೀವು ಈ ಕೋಟೆಯನ್ನು ಕೈವಶ ಮಾಡಿಕೊಂಡಂತಾಗುವದು. ನನ್ನ ಪತಿಯನ್ನು ಬಿಟ್ಟುಬಿಡಿರಿ. ನಾನೂ, ಅವನೂ ಬೆಳಗಾಗುವದರೊಳಗೆ ಇಲ್ಲಿಂದ ಹೋಗಿಬಿಡುವೆವು. ನಾನು ಕೇಳುವದು ಕೇವಲ ಪತಿಭಿಕ್ಷೆ. ನೀವು ನನ್ನ ಈ ಬೇಡಿಕೆಯನ್ನು ಪೂರ್ಣಮಾಡಲಾರಿರಾ? " ಎಂದು ಬೇಡಿಕೊಂಡಳು.

ಶಿಕಂದರನ ಅಂತಃಕರಣವು ಕರಗಿ ನೀರಾಯಿತು. ಅವನು ಆದರದಿಂದ ಗುಲಸಾನೆಯನ್ನೆಬ್ಬಿಸುವದಕ್ಕೆ ಹೋದನು. ಗುಲಸಾನೆಯು ಶಿಕಂದರನ ಅಂಗಸ್ಪರ್ಶದ ಭೀತಿಯಿಂದ ಎದ್ದು, ದೂರಸರಿದು ನಿಂತಳು. ಅವಳ ಪ್ರತಿಭಾಮಂಡಿತವಾದ ರೂಪವು ಶಿಕಂದರನನ್ನು ಪುನಃ ಹುಚ್ಚನನ್ನಾಗಿ ಮಾಡಿತು. ಅವನು— " ಸುಂದರಿ, ನಿನ್ನ ಈ ಪ್ರಾರ್ಥನೆ

ಯನ್ನು ಪೂರ್ಣಮಾಡುವದಕ್ಕೆ ಮುಂದುವರೆದೆನಾದರೆ, ತುಂಬಾ ಸಂಕಟ ಕ್ಕೊಳಗಾಗುವೆನು. ನಾನು ಪ್ರಾಣಕ್ಕೆ ಎರವಾಗುವ ಸಮಯಬಂದರೂ ಬರಬಹುದು. ಬಾದಶಹನಿಗೆ ಕೇವಲ ಈ ರಾಜ್ಯವೊಂದೇ ಬೇಕಾಗಿಲ್ಲ. ಅವನು ನಿಮ್ಮನ್ನು ಸೆರೆಹಿಡಿದು ತರುವದಕ್ಕೆ ಅಪ್ಪಣೆ ಮಾಡಿದ್ದಾನೆ. ಈ ಪ್ರಸಂಗದಲ್ಲಿ ನಾನು ನಿನಗೆ ಸಹಾಯ ಮಾಡುವದು ತೀರ ಅಸಂಭವವು! " ಎಂದು ಹೇಳಿದಳು.

ಗುಲಸಾನೆಯು ಕ್ರೋಧ ಕಂಪಿತಸ್ವರದಿಂದ— " ಸೇನಾಪತಿ, ನಾನೂ, ನನ್ನ ಪತಿಯೂ ನಿನ್ನ ಸೆರೆಯಾಳುಗಳಾಗುವೆವೆಂದು ನೀವು ಭಾವಿಸಿರುವಿರೇನು? ಈ ಗುಲಸಾನೆಯು ತನ್ನ ಜೀವಿತಾವಸ್ಥೆಯಲ್ಲಿ ಮೊಗಲ ಬಾದಶಹನ ರಂಗಮಹಾಲವನ್ನೆಂದಿಗೂ ಪ್ರವೇಶಿಸಳು! ತೀಕ್ಷ್ಣವಾದ ವಿಷಕುಡಿದು ಸತ್ತು ಹೋಗುವೆನು. ನನ್ನ ಗಂಡನಿಗೂ ಕುಡಿಸುವೆನು. ನಾವಿಬ್ಬರೂ ಆತ್ಮ ಗೌರವವನ್ನೆಂದಿಗೂ ಮರೆಯಲಿಕ್ಕಿಲ್ಲವೆಂಬದನ್ನು ಎಂದೂ ಮರೆಯಬೇಡ. " ಎಂದು ಹೇಳಿದಳು.

ಶಿಕಂದರನು ಆ ರಮಣಿಯ ಉಚ್ಚಗುಣಗಳಿಗಾಗಿ ತುಂಬಾ ಸಂತೋಷಪಟ್ಟನು. ಆದರೂ ಅವನು ಅವಳ ಬೇಡಿಕೆಯನ್ನು ಮಾನ್ಯಮಾಡಲಿಲ್ಲ. ಹೀಗೆ ವ್ಯರ್ಥವಾಗಿ ಕಾಲಕಳೆಯುವದು ಯೋಗ್ಯವಲ್ಲೆಂದು ಭಾವಿಸಿ, ಅವನು— " ಸುಂದರಿ, ಮುಂದೆ ಏನೇ ಆಗಲಿ. ಈಗ ನಾನು ಮಾಡತಕ್ಕದ್ದನ್ನು ಮಾಡಲೇ ಬೇಕು. ನಿನ್ನ ಗಂಡನೆಲ್ಲಿ? ತೋರಿಸಿಕೊಡು, " ಎಂದು ಅಂದನು.

ಗುಲಸಾನೆಯು ಭಯಭೀತಳಾದಳು. ಅವಳ ದೇಹವಲ್ಲರಿಯು ನಡುಗಹತ್ತಿತು. ಅವಳ ಇಂದೀವರ ಸಮವಾದ ಕಣ್ಣುಗಳು ಅಶ್ರುಪೂರ್ಣವಾದವು. ಕ್ರೋಧದಿಂದಲೂ ನಿರಾಶೆಯಿಂದಲೂ ಅವಳ ತುಟಿಯು ಮೆಲ್ಲಮೆಲ್ಲನೆ ನಡುಗಹತ್ತಿತು. ಶಿಕಂದರನಿಂದ ಗುಲಸಾನೆಯ ಈಸ್ಥಿತಿಯನ್ನವಲೋಕಿಸುವದಾಗಲಿಲ್ಲ. ಅವನು ಮನಸ್ಸಿನಲ್ಲಿ ಯೋಚಿಸಹತ್ತಿದನು.— " ಎಂಥ ನಿಷ್ಠುರನು ನಾನು! ನನ್ನ ಹೃದಯದ ಆರಾಧ್ಯದೇವತೆಯಿವಳು. ನಾನು ಇವಳನ್ನು ಈ ರೀತಿಯಿಂದ ಗೋಳಾಡಿಸುವದು ಯೋಗ್ಯವಲ್ಲ. ಅಕಬರ

ಬಾದಶಹನು ಕರ್ತವ್ಯಭ್ರಷ್ಟನೆಂದು ತಿಳಿದು ನನ್ನನ್ನು ಸೆರೆಯಲ್ಲಿರಿಸುವದಾದರೆ, ಇರಿಸಲಿ! ದೇಹಾಂತಶಿಕ್ಷೆಯನ್ನು ವಿಧಿಸುವದಾದರೆ ವಿಧಿಸಲಿ! ನಾನಿದನ್ನು ಸಂತೋಷದಿಂದ ಸಹಿಸಿಕೊಳ್ಳುವೆನು; ಆದರೆ ಈ ಅಪೂರ್ವಸುಂದರಿಯು ಈ ಮೇರೆಗೆ ಶೋಕಿಸುತ್ತಿರುವದನ್ನು ನಾನು ನೋಡಲಾರೆನು!

ಇವಳ ವಿನಂತಿಗೆ ಮಾನಕೊಟ್ಟರೆ ಆಗುವದಾದರೂ ಏನು? ಕೋಟೆಯು ನನ್ನ ಕೈವಶವಾಗಿದೆ. ನನ್ನ ಸೈನಿಕರು ಕೋಟೆಯನ್ನು ವ್ಯಾಪಿಸಿಬಿಟ್ಟಿದ್ದಾರೆ. ಸೋಹಾನಿಯು ಪಾರಾಗಿ ಓಡಿಹೋಗುವಂತಿಲ್ಲ. ಹೀಗಿರಲು ಇವಳ ಬೇಡಿಕೆಯಂತೆ ಬೆಳಗಾಗುವವರೆಗೆ ತಡೆಯಲಿಕ್ಕೆ ಅಡ್ಡಿಯೇನು? ನಾನು ಹೀಗೆ ಮಾಡಿದರೆ, ಇವಳ ಮೇಲೆ ಉಪಕಾರಮಾಡಿದಂತಾಗುವದು. ಇದಕ್ಕಾಗಿ ಇವಳು ಕೃತಜ್ಞತೆಯನ್ನು ತೋರಿಸದಿರಳು! ನಾನು ಸೋಹಾನಿಯನ್ನೂ ಇವಳನ್ನೂ ಸೆರೆಹಿಡಿದು, ಆಗ್ರಾಕ್ಕೆ ಒಯ್ದೆನೆಂದರೆ, ಬಾದಶಹನು ಸೋಹಾನಿಗೆ ದೇಹಾಂತಶಿಕ್ಷೆಯನ್ನು ವಿಧಿಸುವನು; ಇಲ್ಲವೆ ಅವನನ್ನು ಗ್ವಾಲ್ಹೇರದ ತುರಂಗದಲ್ಲಿರಿಸುವನು. ತರುವಾಯ ಗುಲಸಾನೆಯು ನನ್ನವಳೆ. ನಾನು ಸಾಮ್ರಾಟನ ಬಳಿಯಲ್ಲಿ ಇವಳ ಭಿಕ್ಷೆಯನ್ನು ಬೇಡಿದರೆ, ಅವನು ಇವಳನ್ನು ನನಗೆ ದಯಪಾಲಿಸಲಾರನೇ?

ಭಾವೀಸುಖಕಲ್ಪನೆಯಿಂದ ಶಿಕಂದರನು ಹರ್ಷಿತನಾಗಿ—"ಮನೋಹರೆ, ನಾನು ನಿನ್ನ ಈ ಸಣ್ಣ ಮೋರೆಯನ್ನು ನೋಡಲಾರೆನು! ಈಗ ನಾನು ನಿನಗೋಸುಗ ಮಾಡಬೇಕಾದದ್ದೇನು?" ಎಂದು ಕೇಳಿದನು.

ಮೊಗಲವೀರ, ನನ್ನ ಪತಿಯು ಶೂರನು. ದೊಡ್ಡ ಮನುಷ್ಯನು. ಅವನು ಅಕಬರನಿಗೆ ಎದುರಾಗಿ ನಿಂತು ಈ ರಾಜ್ಯವನ್ನು ಸ್ಥಾಪಿಸಿದ್ದಾನೆ. ಪ್ರಜೆಗಳಿಂದ ಹೊಗಳಿಸಿಕೊಳ್ಳುವಂಥ ರಾಜ್ಯಕಾರಭಾರವನ್ನು ಸಾಗಿಸುತ್ತಿದ್ದಾನೆ. ಇಂಥ ಶ್ರೇಷ್ಠಮನುಷ್ಯನು ಮದ್ಯಸೇವನೆಯಿಂದ ಸಂಜ್ಞಾಹೀನನಾಗಿ ಬಿದ್ದುಕೊಂಡಾಗ, ಬಂದಿಯಾಗಬಾರದೆಂದು ನನ್ನ ಇಚ್ಛೆಯು. ಈ ಸಮಯದಲ್ಲಿ ಅವನು ಸೆರೆಯಾಳಾದರೆ, ಅಕಬರನೂ ಇತರ ಜನರೂ ಸೋಹಾನಿಯು ಶೂರನಲ್ಲ, ವಿಲಾಸದ ದಾಸನು, ಎಂದು ಭಾವಿಸಬಹುದು.

ನನ್ನ ಸ್ವಾಮಿಯು ಈ ಮೇರೆಗೆ ಕಲಂಕಹೊಂದಿದ್ದನ್ನು ನಾನು ನೋಡ ಲಾರೆನು.....ಅದಕ್ಕಾಗಿ ನೀವು ಮುಂಜಾವಿನವರೆಗೆ ತಡೆಯಿರಿ. ಆಮೇಲೆ ನಿಮ್ಮ ಮನಸ್ಸಿಗೆ ಬಂದಂತೆ ಮಾಡಬಹುದು.

ಶಿಕಂದರನು ಅನನ್ಯೋಪಾಯನಾಗಿ—"ಸುಂದರಿ, ನಾನು ನಿನ್ನ ಈ ಕಾತರ ಪ್ರಾರ್ಥನೆಯನ್ನು ಮನ್ನಿಸಿದ್ದೇನೆ. ನಿನ್ನ ಇಚ್ಛೆಯಂತೆ ನಾಳೆ ಮುಂಜಾವಿನವರೆಗೆ ನಾನು ನಿನ್ನ ಪತಿಯನ್ನು ಮುಟ್ಟುವದಿಲ್ಲ" ಎಂದು ಅಂದನು.

ಸಾಹೇಬ, ದೇವರು ನಿಮಗೆ ಮಂಗಲವನ್ನುಂಟುಮಾಡಲಿ. ನಾನು ನಿಮ್ಮ ಈ ಉಪಕಾರವನ್ನೆಂದೂ ಮರೆಯೆನು. ಪ್ರಸಂಗವಿಶೇಷವಲ್ಲಿ ನಾನು ನಿಮಗೋಸುಗ ಆತ್ಮತ್ಯಾಗಮಾಡಿ, ಈ ಉಪಕಾರವನ್ನು ತೀರಿಸುವದಕ್ಕೆ ಹಿಂದೆ ಮುಂದೆ ನೋಡುವದಿಲ್ಲ.

ಶಿಕಂದರನು ಆಶಾನ್ವಿತನಾಗಿ—"ಸುಂದರಿ, ನಿನ್ನ ಪ್ರಾರ್ಥನೆಯಂತೆ ಬೆಳಗಾಗುವವರೆಗೆ ಸುಮ್ಮನೆ ಕುಳಿತುಕೊಳ್ಳುತ್ತೇನೆ. ಬೆಳಗಾದನಂತರ ನೀವಿಬ್ಬರೂ, ಯಾವತರದ ಗದ್ದಲವನ್ನೂ ಮಾಡದೆ, ನನ್ನ ಕೈವಶವಾಗ ಬೇಕು. ನಾನು ನಿಮ್ಮನ್ನು ಆಗ್ರಾಕ್ಕೆ ಕರೆದುಕೊಂಡು ಹೋಗುವೆನು. ನಿಮ್ಮ ಮರ್ಯಾದೆಗೆ ಯಾವತರದಿಂದಲೂ ವ್ಯತ್ಯಯ ಬರದಂತೆ ವ್ಯವಸ್ಥೆ ಇಡಿಸುವೆನು. ಆಗ್ರಾಕ್ಕೆಹೋದನಂತರ ಬಾದಶಹನಬಳಿಯಲ್ಲಿ ನಿಮ್ಮ ಮುಕ್ತಿ ಗೋಸುಗ ಪ್ರಯತ್ನಿಸುವೆನು. ಸೋಹಾನಿಯು ಬಾದಶಹನ ಅಂಕೆಯನ್ನೊ ಪ್ಪಿಕೊಂಡರೆ, ಪುನಃ ಈ ರಾಜ್ಯವ ಅರಸೊತ್ತಿಗೆಯನ್ನು ಹೊಂದಬಹುದು," ಎಂದು ಹೇಳಿದನು.

ಗುಲಸಾನೆಯು ಕೈಗಳನ್ನೆತ್ತಿ ಪ್ರಫುಲ್ಲಮುಖದಿಂದ—"ಮೊಗಲವೀರ, ನಿಮ್ಮ ಈ ಉದಾರಗುಣವು ಅತ್ಯಂತ ಪ್ರಶಂಸನೀಯವಾದುದು. ನೀವು ದೇವರಿಂದ ಈಉದಾರ ಗುಣಕ್ಕೆ ತಕ್ಕ ಪ್ರತಿಫಲವನ್ನು ಹೊಂದದಿರಲಾರಿರಿ. ನೀವು ಶತ್ರುಗಳಾಗಿ ಬಂದಿದ್ದರೂ, ಇಂದು ನನ್ನ ಅತಿಥಿಗಳು. ನಾನು ನಿಮ್ಮ ಸತ್ಕಾರವನ್ನು ಮಾಡಲೇಬೇಕು. ಆದರೆ ನನ್ನ ಸ್ವಾಮಿಯು ಮದ್ಯದ ಹಾದೀನೋಡುತ್ತ ಕುಳಿತು ಬಹಳ ಕಾಲವಾಯಿತು. ಅವನಿಗೆ ಈ ಮದಿ.

ರೆಯ ಪಾತ್ರೆಯನ್ನು ಕೊಟ್ಟು ಬರುವೆನು. ಆವರೆಗೆ ನೀವು ಇಲ್ಲಿಯೇ ನಿಂತುಕೊಳ್ಳಿರಿ," ಎಂದು ಹೇಳಿ, ಮಂದಗಮನದಿಂದ ಹೊರಟುಹೋದಳು. ಅವಳ ಅಪ್ಪಣೆಯಂತೆ ಶಿಕಂದರನು ಅಲ್ಲಿಯೇ ನಿಂತುಕೊಂಡನು.

ಗುಲಸಾನೆಯು ಸಮೀಪದಲ್ಲಿಯದೊಂದು ಕೋಣೆಯಲ್ಲಿ ಹೊಕ್ಕಳು. ಶಾಂತವಾದ ದೀಪಗಳನ್ನು ಹೊತ್ತಿಸಿದಳು. ಇದರಿಂದ ಆ ಕೋಣೆಯು ಪ್ರಕಾಶಮಾನವಾಗಿ ತೋರಹತ್ತಿತು. ಶಿಕಂದರನು ಆ ಕಡೆಗೆ ನೋಡಿದನು. ಕೋಣೆಯು ಉತ್ತಮವಾಗಿ ಶೃಂಗರಿಸಲ್ಪಟ್ಟಿತ್ತು. ಗೋಡೆಗಳಲ್ಲಿ ದೊಡ್ಡ ದೊಡ್ಡ ಕನ್ನಡಿಗಳಿದ್ದವು. ದೀಪಕಿರಣಗಳು ಆ ಕನ್ನಡಿಗಳ ಮೇಲೆ ಬಿದ್ದು, ಚಂದವಾದ ನೋಟವನ್ನುಂಟುಮಾಡಿದ್ದವು. ಲೋಬಾನದ ಮತ್ತು ಗುಲಾಬಿಯ ಮಿಶ್ರವಾಸನೆಯಿಂದ, ಆ ಕೋಣೆಯು ಸುಗಂಧಪೂರ್ಣವಾಗಿತ್ತು.

ಗುಲಸಾನೆಯು ತಿರುಗಿ ಬಂದು, ಶಿಕಂದರನನ್ನು ಆ ಕೋಣೆಗೆ ಕರೆದುಕೊಂಡು ಹೋದಳು. ಅವನಿಗೆ ಅಲ್ಲಿರುವದೊಂದು ಕುರ್ಚಿಯ ಮೇಲೆ ಕೂಡಹೇಳಿ, ತಾನು ಹೊರಟುಹೋದಳು. ಶಿಕಂದರನು ಕುಳಿತುಕೊಂಡು ಯೋಚಿಸತೊಡಗಿದನು—"ನಾನು ಇವಳ ಶತ್ರುವು. ಇವಳನ್ನು ಸೆರೆಹಿಡಿದುಕೊಂಡು ಹೋಗುವವಕ್ಕೆ ಬಂದವನು. ನನ್ನ ಪ್ರಯತ್ನದಿಂದ ರಾಣಿಯಾಗಿದ್ದ ಇವಳು ಭಿಕ್ಷುಕಳಾಗುವಳು. ಹೀಗಿದ್ದರೂ ಇವಳು ನನ್ನೊಡನೆ ಈ ಮೇರೆಗೆ ಉದಾರತೆಯಿಂದ ವರ್ತಿಸುವದೇಕೆ? ನಿಜವಾಗಿಯೇ ಇವಳು ಇಷ್ಟೊಂದು ದೊಡ್ಡಮನಸ್ಸಿನವಳಾಗಿರಬಹುದೇನು? ಇಲ್ಲವೆ ವಂಚನೆಯಿಂದ ಈಮೇರೆಗೆ ವರ್ತಿಸುತ್ತಿರಬಹುದೆ? ನನಗಂತೂ ಇವಳ ಈ ವ್ಯವಹಾರವು ಮೋಸದ್ದೆಂದು ತೋರುತ್ತದೆ. ಸೋಹಾನಿಯೊಡನೆ ಆಲೋಚನೆ ಮಾಡಿ, ಸುಸಂಧಿಯನ್ನು ನೋಡಿ, ನನ್ನನ್ನು ವಿಪತ್ತಿನಲ್ಲಿ ಕೆಡವಿ, ಪಾರಾಗಿಹೋಗುವಯತ್ನ ನಡೆಸಿದ್ದರೂ ನಡೆಸಿರಬಹುದು!"

ಗುಲಸಾನೆಯು ಅಲ್ಲಿಗೆ ಬಂದಳು. ಶಿಕಂದರನ ವಿಚಾರಪ್ರವಾಹವು ಕಟ್ಟಾಯಿತು. ಅವನು ಗುಲಸಾನೆಯ ಮುಖವನ್ನು ನೋಡಿದನು. ಆ ಮೋರೆಯಲ್ಲಿ ಉದ್ವೇಗದ ಚಿಹ್ನವಿರಲಿಲ್ಲ. ಹಾಸ್ಯರೇಖೆಯು ಮಿನುಗುತ

ಲಿತ್ತು. ಅವಳು ಶಿಕಂದರನನ್ನು ಕುರಿತು—“ನನ್ನ ಪತಿಗೆ, ನೀವು ಬಂದ ಸುದ್ದಿಯನ್ನು ತಿಳಿಸಿದೆನು. ಮತ್ತು ನಿಮ್ಮ-ನಮ್ಮ ...ರನ್ನೂ ... ದೆನು. ಈಗ ಅವನು ನಿಮ್ಮ ಬಂದಿಯಾಗಿ ಆಗ್ರಾಕ್ಕೆ ಬರುವದಕ್ಕೆ ಒಪ್ಪಲೊಲ್ಲನು; ಆದರೆ ಒಪ್ಪಿದ ಹೊರತು ಗತ್ಯಂತರವಿಲ್ಲ. ನಾಳೆ ಅವನು ನಿಮ್ಮ ಪ್ರಸ್ತಾಪಕ್ಕೆ ನಿಶ್ಚಯವಾಗಿಯೂ ಸಮ್ಮತಿಕೊಡುವನೆಂದು ನನಗೆ ತೋರುತ್ತದೆ. ಮುಂದೆ ನಮ್ಮ ಅವಸ್ಥೆಯು ಏನೇ ಆಗಲಿ, ಈಗ ಕೊಟ್ಟ ವಚನದ ಪ್ರಕಾರ ನಿಮ್ಮೊಡನೆ ಆಗ್ರಾಕ್ಕೆ ಬರುವೆವು. ನನ್ನ ಸ್ವಾಮಿಯು ನಿಮ್ಮ ಉದಾರಗುಣವನ್ನು ಬಹಳವಾಗಿ ಹೊಗಳಿದನು. ಅವನ ಅಪ್ಪಣೆಯಿಂದಲೇ ಈಗ ನಾನು ನಿಮ್ಮ ಸತ್ಕಾರ ಮಾಡುವದಕ್ಕೆ ಬಂದಿದ್ದೇನೆ,” ಎಂದು ಹೇಳಿದಳು.

ಶಿಕಂದರನು ಗುಲಸಾನೆಯ ಮಾತನ್ನು ನಂಬಿದನು. ಅವನ ಮನಸ್ಸಿನ ಸಂದೇಹವು ದೂರಾಯಿತು. ಅವನು ಗುಲಸಾನೆಯನ್ನು ಕುರಿತು—ನಾನು ನಿನ್ನ ಶತ್ರುವು—ನಿನ್ನನ್ನು ನಾಶಮಾಡಲು ಬಂದವನು. ಇಂಥವನಿಗೆ ನೀನು ಇಷ್ಟೊಂದು ಸತ್ಕಾರವನ್ನು ತೋರಿಸುತ್ತಿರುವದೇಕೆ? ಎಂದು ಕೇಳಿದನು.

ಗುಲಸಾನೆಯು ತೀಕ್ಷ್ಣವಾದುದೊಂದು ಕಟಾಕ್ಷವನ್ನೆಸೆದು, ಸ್ಫುರಿತಾಧರಗಳಲ್ಲಿ ಮಂದಹಾಸವನ್ನು ತಂದುಕೊಂಡು—ಖಾನಸಾಹೇಬ, ನಾನು ಸ್ವಾರ್ಥವಿರಹಿತಳಾಗಿ ನಿಮ್ಮ ವಿಷಯದಲ್ಲಿ ಈಮೇರೆಗೆ ಸನ್ಮಾನವನ್ನು ತೋರಿಸುತ್ತಿರುವೆನೆಂದು ಭಾವಿಸಬೇಡಿರಿ. ನೀವು ಆಗ್ರಾಕ್ಕೆ ಹೋದಿರೆಂದರೆ, ಗುಲಸಾನೆಯು ನಿಮ್ಮೊಡನೆ ಯಾವರೀತಿಯಿಂದ ವರ್ತಿಸಿದಳೆಂದು ಬಾದಶಹನು ನಿಮ್ಮನ್ನು ಕೇಳಬಹುದು. ಆಗ ನೀವು ನಮ್ಮ ವಿಷಯದಲ್ಲಿ ಸದಭಿಪ್ರಾಯವನ್ನು ವ್ಯಕ್ತಮಾಡಿದರೆ, ನಮಗೆ ತುಂಬಾ ಹಿತವುಂಟು. ಸಂತುಷ್ಟನಾದ ಬಾದಶಹನು ಈ ರಾಜ್ಯವನ್ನು ನಮಗೆ ಕೊಟ್ಟುಬಿಡಬಹುದು. ಅದಕ್ಕಾಗಿಯೇ ನಾನು ಈಮೇರೆಗೆ ನಿಮ್ಮ ಆದರಾತಿಥ್ಯವನ್ನು ಮಾಡುತಲಿದ್ದೇನೆ, ಎಂದು ಹೇಳಿದಳು.

ಶಿಕಂದರನಿಗೆ ಗುಲಸಾನೆಯ ಮಾತು ಯೋಗ್ಯವಾದದ್ದೆಂದು

ತೋರಿತು. ಅವನು ಸುಮ್ಮನೆ ಕುಳಿತನು. ಗುಲಸಾನೆಯು ಅವನ ಮನಸ್ಸಿನಲ್ಲಿ ಏನಾದರೂ ಸಂದೇಹವುಂಟಾಗಿರಬಹುದೆಂದು ಭಾವಿಸಿ—"ಸಾಹೇಬ, ಸುಮ್ಮನೆ ಕುಳಿತಿರಲ್ಲ! ನನ್ನ ಮಾತಿನಲ್ಲಿ ನಿಮಗೆ ವಿಶ್ವಾಸವುಂಟಾಗಲೊಲ್ಲದೇನು? ಯಾವದೋ ಒಂದು ಕೆಟ್ಟ ಉದ್ದೇಶದಿಂದ ಇವಳು ಈ ರೀತಿ ವರ್ತಿಸುತ್ತಿರುವಳೆಂದು ನೀವು ಭಾವಿಸುತ್ತಿರಬಹುದು. ನಿಮ್ಮ ಈ ಗೃಹಿಕೆಯು ತಪ್ಪಾದದ್ದು. ನನ್ನಲ್ಲಿ ಅಂಥ ಯಾವ ಕೆಟ್ಟ ಉದ್ದೇಶವೂ ಇಲ್ಲ. ನೀವು ಐನೂರು ಸೈನಿಕರನ್ನು ತೆಗೆದುಕೊಂಡು ಬಂದು ಈ ಕೋಟೆಯನ್ನು ಮುತ್ತಿರುವಿರಿ. ನನ್ನ ಬಳಿಯಲ್ಲ ಒಬ್ಬನೂ ಸೈನಿಕನಿಲ್ಲ. ನನ್ನ ಯಾವತ್ತೂ ಸೈನಿಕರು ಕೋಟೆಯ ಹೊರಗಿರುವ ಛಾವಣಿಯಲ್ಲಿದ್ದಾರೆ. ಮೇಲಾಗಿ ಸೋಹಾನಿಯು ಸುರಾಪಾನದಿಂದ ಸಂಜ್ಞಾಹೀನನು. ಈ ಸ್ಥಿತಿಯಲ್ಲಿ ನಾನು ವಂಚನೆಯನ್ನವಲಂಬಿಸುವದು ಸಾಧ್ಯವಿಲ್ಲ. ಇಂದು ನನ್ನ ಸ್ವಾಮಿಯ ಹುಟ್ಟಿದ ದಿವಸವು. ಈ ಉತ್ಸವಕ್ಕಾಗಿ ಸೈನಿಕರನ್ನು ಮನೆಗೆ ಕಳಿಸಿದೆ. ಕನಿಷ್ಟಪಕ್ಷಕ್ಕೆ ಇಪ್ಪತ್ತೈದುಜನ ಸೈನಿಕರ ಸಹಾಯವು ನನಗಿದ್ದರೆ, ನಾನು ನಿಮ್ಮೊಡನೆ ಈ ರೀತಿಯಿಂದ ಎಂದೂ ವರ್ತಿಸುತ್ತಿದ್ದಿಲ್ಲ. ನನ್ನಲ್ಲಿರುವ ಕೌಶಲ್ಯದಿಂದ ನಿಮ್ಮನ್ನು ಹೊರಗೆ ಹಾಕಿ ಬಿಡುತ್ತಿದ್ದೆನು. ಈಗ ನಾನು ಸಂಪೂರ್ಣವಾಗಿ ಸಹಾಯಹೀನಳಾಗಿದ್ದೇನೆ. ಈ ಸ್ಥಿತಿಯಲ್ಲಿ ನಿಮ್ಮನ್ನು ಸಂತುಷ್ಟರನ್ನಾಗಿ ಮಾಡಿದಹೊರತು ಗತ್ಯಂತರವಿಲ್ಲ," ಎಂದು ಹೇಳಿದಳು.

ಶಿಕಂದರನು ಮಾತಾಡುವದರಲ್ಲಿದ್ದನು. ಗುಲಸಾನೆಯು ಮಾತಾಡಗೊಡದೆ—ಸಾಹೇಬ, ನೀವು ಇಲ್ಲಿಯೇ ಕುಳಿತುಕೊಳ್ಳಿರಿ. ನಾನು ನಿಮಗಾಗಿ ಖಾದ್ಯ ಪದಾರ್ಥಗಳನ್ನೂ, ಸಿರಾಜಿಯನ್ನೂ ತರುವೆನು, ಎಂದು ಹೇಳಿ ಹೊರಟುಹೋದಳು. ಶಿಕಂದರನು ಕೋಣೆಯನ್ನು ಪರೀಕ್ಷಿಸಿ ನೋಡತೊಡಗಿದನು.

ಕೋಣೆಯು ವಿಸ್ತೃತವಾದದ್ದಿದ್ದು, ನೆಲದ ಮೇಲೆ ರತ್ನಗಂಬಳಿಯು ಹಾಸಲ್ಪಟ್ಟಿತ್ತು. ಅಲ್ಲಲ್ಲಿ ಕುರ್ಚಿ-ಮೇಜುಗಳು ಇಡಿಸಲ್ಪಟ್ಟ

ದ್ದವು. ಒಂದೆಡೆಯಲ್ಲಿ ಸತಾರ–ವೀಣೆಗಳು ಗಾಯಕರ ಮಾರ್ಗಪ್ರತೀಕ್ಷೆ ಮಾಡುತಲಿದ್ದವು. ಅಲ್ಲಲ್ಲಿ ಹೂಮಾಲೆಗಳು ಇಳಿಬಿದ್ದಿದ್ದವು. ಕೆಲವು ಕಡೆಯಲ್ಲಿ ಬೆಳ್ಳಿಯಪಾತ್ರೆಯಲ್ಲಿ ಅದೇ ಅರಳಿದ ಹೂಗಳು ವ್ಯವಸ್ಥೆಯಿಂದ ಇರಿಸಲ್ಪಟ್ಟಿದ್ದವು. ಈ ಹೂಗಳ ಸುವಾಸನೆಯಿಂದ ಆ ಕೋಣೆಯು ನಂದನವನದಂತೆ ಭಾಸವಾಗುತ್ತಲಿತ್ತು. ಕೋಣೆಯ ಮಧ್ಯಭಾಗದಲ್ಲಿ ಬೆಳ್ಳಿಯಕಾರಂಜಿಯಿತ್ತು. ಅದರೊಳಗಿಂದ ಗುಲಾಬಿಯ ನೀರು ಹಾರಿ, ಕೆಳಗಿರುವ ದೊಡ್ಡ ಸಂಗಮರವರಿ ಪಾತ್ರೆಯಲ್ಲಿ ಬೀಳುತ್ತಿತ್ತು. ಇದು ಆ ಕೋಣೆಯಲ್ಲಿ ಅದೇ ಅರಳಿದ ಗುಲಾಬೀ ಹೂಗಳ ಸುವಾಸನೆಯನ್ನು ಇಡುಗಿಸಿತ್ತು.

ತುಸು ಹೊತ್ತಿನ ಮೇಲೆ ಗುಲಸಾನೆಯು ತಿರುಗಿ ಬಂದಳು. ಅವಳ ಸಂಗಡ ಇಬ್ಬರು ದಾಸಿಯರಿದ್ದರು. ಒಬ್ಬಳು ಸುವರ್ಣದ ತಾಟಿನಲ್ಲಿ ಖಾದ್ಯ ಪದಾರ್ಥಗಳನ್ನು ತಂದಿದ್ದಳು. ಬೇರೊಬ್ಬಳು ಬೆಳ್ಳಿಯ ಪಾತ್ರೆಯಲ್ಲಿ ಸಿರಾಜಿಯನ್ನೂ, ವಸ್ತ್ರಗಳನ್ನೂ ತಂದಿದ್ದಳು.

ಗುಲಸಾನೆಯು ಹಾಸ್ಯಮುಖಿಯಾಗಿ—ಸಾಹೇಬ, ಅತಿಥಿಗಳಿಗೆ ವಸ್ತ್ರ–ಖಾದ್ಯ–ಪೇಯಗಳನ್ನು ಕೊಟ್ಟು ಸನ್ಮಾನಿಸುವದು ನಮ್ಮ ಪಠಾಣರ ಪದ್ಧತಿಯು. ತಾವು ಇವುಗಳನ್ನು ಸ್ವೀಕರಿಸಿ. ನಮ್ಮ ನಿಯಮಪಾಲನೆಗೆ ಸಹಾಯ ಮಾಡುವಿರೆಂದು ನಾನು ಆಶಿಸುತ್ತೇನೆ, ಎಂದು ಹೇಳಿದಳು.

ಗುಲಸಾನೆಯು ಶಿಕಂದರನ ತೀರ ಸಮೀಪಕ್ಕೆ ಬಂದು, ಆತ್ಮೀಯತೆಯನ್ನು ನಟಿಸಿ, ಅವನ ಶಿರಸ್ತ್ರಾಣವನ್ನು ತೆಗೆದಳು. ತರುವಾಯ ಅವಳು ಚಂಪಕಗಳನ್ನು ತಿರಸ್ಕರಿಸುತ್ತಿರುವ ತನ್ನ ಕೋಮಲಾಂಗುಲಿಗಳಿಂದ ಅವನ ಬುರುಡಿಗಳನ್ನು ಬಿಚ್ಚಹತ್ತಿದಳು. ಆ ತರುಣಿಯ ಕರಸ್ಪರ್ಶದಿಂದ ಶಿಕಂದರನ ಮೈಯಲ್ಲಿ ವಿದ್ಯುತ್ತಿನ ಸಂಚಾರವಾದಂತಾಯಿತು. ಅವನು ಅತ್ತಿತ್ತ ಹೊರಳಾಡದೆ, ಸುಮ್ಮನೆ ಕುಳಿತುಬಿಟ್ಟಿದ್ದನು. ದಾಸಿಯರು ಬಂದು, ಕತ್ತಿ ಢಾಲುಗಳನ್ನು ತೆಗೆದು ಬಳಿಯಲ್ಲಿರಿಸಿದರು. ಗುಲಸಾನೆಯ ಸ್ಪರ್ಶದಿಂದ ಮೈಮರೆತಿದ್ದ

ಶಿಕಂದರನು ಯಾವದಕ್ಕೂ ಬೇಡೆನ್ನಲಿಲ್ಲ. ಗುಲಸಾನೆಯ ಈ ಅನು ಗ್ರಹಾತಿರೇಕವನ್ನು ನೋಡಿ, ಶಿಕಂದರನಿಗೆ ಸ್ವರ್ಗವು ಮೂರೇ ಬೆರಳು ಳಿದಂತಾಗಿ ಹೋಗಿತ್ತು.

ಗುಲಸಾನೆಯು ಶಿಕಂದರನ ಅಂಗಿಯನ್ನು ತೆಗೆದು, ತಾನು ತಂದಿದ್ದ ಅಂಗಿಯನ್ನು ತೊಡಿಸಿದಳು. ಬೇರೆ ಶಿರಸ್ತ್ರಾಣವನ್ನು ಹಾಕಿ ದಳು. ತರುವಾಯ ಅವಳು ತಣ್ಣಗಿನ ನೀರಿನಿಂದ ತುಂಬಿದ ಬೆಳ್ಳಿಯ ಪಾತ್ರೆಯನ್ನು ಅವನ ಕೈಯಲ್ಲಿ ಕೊಟ್ಟು—"ಹೊರಗೆ ಹೋಗಿ, ಮೋರೆ ತೊಳೆದುಕೊಂಡು ಬರ್ರಿ" ಎಂದು ಹೇಳಿದಳು. ಮುಗ್ಧನಾಗಿ ಹೋಗಿದ್ದ ಶಿಕಂದರನು ಕೂಡಲೆ ಅವಳ ಅಪ್ಪಣೆ ಪಾಲಿಸಿದನು.

ಶಿಕಂದರನು ಪುನಃ ಆಸನದಮೇಲೆ ಕುಳಿತುಕೊಂಡನು. ದಾಸಿ ಯರು ಖಾದ್ಯಪದಾರ್ಥಗಳನ್ನು ಅವನ ಮುಂದೆ ಇರಿಸಿದರು. ಗುಲ ಸಾನೆಯ ಆಗ್ರಹದಿಂದ ಶಿಕಂದರನು ಯಥೇಚ್ಛವಾಗಿ ಭೋಜನ ಮಾಡಿದನು. ತರುವಾಯ ಗುಲಸಾನೆಯು ಮದಿರೆಯಿಂದ ತುಂಬಿದ ಬಂಗಾರದ ಪಾತ್ರೆಯನ್ನು ಅವನ ಮುಂದೆ ಹಿಡಿದು—ನಮ್ಮ ಅಫ ಗಾಣಿಸ್ತಾನವು ದ್ರಾಕ್ಷೆಯ ತೋಟಗಳಿಂದ ಪೂರ್ಣವಾದದ್ದು. ಆ ದೇಶದಲ್ಲಿ ಮನೆಗೆ ಬಂದ ಅತಿಥಿಗಳಿಗೆ ಮೊದಲು ದ್ರಾಕ್ಷೆಯ ರಸವನ್ನು ಕೊಟ್ಟು ಸತ್ಕರಿಸುವ ಪದ್ಧತಿಯುಂಟು. ಇದು ಹಿಂದುಸ್ತಾನವು. ಇಲ್ಲಿ ಉತ್ತಮವಾದ ದ್ರಾಕ್ಷೆಯರಸವು ಸಿಗುವದಿಲ್ಲ. ಅವಕ್ಕಾಗಿ ನಾನು ನಿಮಗೋಸುಗ ಬಸರಾಪಟ್ಟಣದಿಂದ ಉತ್ತಮವಾದ ಸಿರಾಜಿಯನ್ನು ತಂದಿರಿಸಿದ್ದೇನೆ. ನೀವು ಇನ್ನು ಮುಂದೆ ನಮ್ಮೊಡನೆ ಮಿತ್ರತ್ವದಿಂ ದಾಚರಿಸುವಿರೆಂಬದನ್ನು ತೋರ್ಪಡಿಸುವದಕ್ಕಾಗಿ, ಈ ಸಿರಾಜಿಯನ್ನು ಸೇವಿಸಬೇಕು, ಎಂದು ಹೇಳಿದಳು.

ಶಿಕಂದರನು ವಿಚಾರಕ್ಕೊಳಗಾದನು. ಈ ಸಿರಾಜಿಯಲ್ಲಿ ವಿಷವನ್ನು ಕೂಡಿಸಿರಬಹುದೇನು? ಎಂಬ ಸಂದೇಹವು ಅವನಿಗುಂಟಾಯಿತು. ಬುದ್ಧಿ ವಂತೆಯಾದ ಗುಲಸಾನೆಯು ಶಿಕಂದರನ ಈ ಮನೋಭಾವನೆಯನ್ನು ತಿಳಿದಳು. ಅವಳು—ಖಾನಸಾಹೇಬ, ಈ ಸಿರಾಜಿಯಲ್ಲಿ ವಿಷವು ಕೂಡಿದೆ

ಬಹುದೆಂಬ ಶಂಕೆಯು ತಮಗುಂಟಾದಂತೆ ತೋರುತ್ತದೆ. ಈ ಕಲ್ಪನೆಯನ್ನು ಮನಸ್ಸಿನಿಂದ ಹೊರದೂಡಿಬಿಡಿರಿ. ಪಠಾಣರಮಣಿಯು ಇಂಥ ನೀಚಕೆಲಸವನ್ನೆಂದೂ ಮಾಡಳೆಂಬದನ್ನು ಮರೆಯಬೇಡಿರಿ. ಪಠಾಣರು ಅತಿಥಿರಕ್ಷಣೆಗಾಗಿ ತಮ್ಮ ಪ್ರಾಣಕೊಟ್ಟ ಉದಾಹರಣೆಗಳು ಇತಿಹಾಸದಲ್ಲಿ ಅನೇಕ ಇವೆ. ಇಂಥ ಉದಾರ ಹೃದಯದ ಪಠಾಣರು ಅತಿಥಿಯನ್ನು ವಂಚನೆಯಿಂದ ಕೊಲ್ಲುವಕೆಲಸವನ್ನೆಂದೂ ಮಾಡಲಾರರು. ಎಂದು ಅಂದಳು.

ಗುಲಸಾನೆಯ ಈ ತಿರಸ್ಕಾರದಿಂದ ಶಿಕಂದರನು ಲಜ್ಜಿತನಾದನು; ಗುಲಸಾನೆಯಂಥ ಚತುರ ರಮಣಿಯ ಬಳಿಯಲ್ಲಿ ಈ ರೀತಿ ಮನೋದೌರ್ಬಲ್ಯವನ್ನು ತೋರಿಸಿದ್ದು ಅನುಚಿತವಾಯಿತೆಂದು ಭಾವಿಸಿ—" ಸುಂದರಿ, ಆ ಪಾತ್ರೆಯನ್ನಿಲ್ಲಿತಾ. ನಾನು ಅದನ್ನು ಸೇವಿಸುವೆನು, " ಎಂದು ಅಂದನು.

ಗುಲಸಾನೆಯು ಪಾತ್ರೆಯನ್ನು ಶಿಕಂದರನಕೈಯಲ್ಲಿ ಕೊಟ್ಟು—" ಸಾಹೇಬ, ನನ್ನ ಸ್ವಾಮಿಯು ಒಂದು ತಾಸಿನವರೆಗೆ ನಿಮ್ಮ ಸತ್ಕಾರವನ್ನು ಮಾಡಲು ಪರವಾನಿಗೆಯನ್ನು ಕೊಟ್ಟಿದ್ದಾನೆ. ನಾನು ಅಷ್ಟು ಹೊತ್ತಿನವರೆಗೆ ನಿಮ್ಮ ಬಳಿಯಲ್ಲಿ ಇರಬಲ್ಲೆನು. ನಾನು ವೀಣೆಯನ್ನು ಚನ್ನಾಗಿ ಬಾರಿಸುತ್ತೇನೆ. ನೀವು ಸಮ್ಮತಿಸುವಿರಾದರೆ, ಇಂಪಾದ ನಾದದಿಂದ ನಿಮ್ಮನ್ನು ಸಂತೋಷಗೊಳಿಸಬಲ್ಲೆನು.

ಶಿಕಂದರನು ಆ ಮದಿರೆಯನ್ನು ಸೇವಿಸಿದನು. ಸುಗಂಧ ಪೂರ್ಣವಾದ ಆ ಸಿರಾಜಿಯು ಆ ಸುಂದರಿಯ ಕರಸ್ಪರ್ಶದಿಂದ ಮತ್ತಿಷ್ಟು ಸುವಾಸನೆಯನ್ನು ಹೊಂದಿತ್ತು. ಶಿಕಂದರನಿಗೆ ಎತ್ತ ನೋಡಿದತ್ತ ಸುವಾಸನೆಯೇ ತುಂಬಿಕೊಂಡಿರುವಂತೆ ತೋರಿತು. ಅವನು ಆವೇಶಭರದಿಂದ ಗುಲಸಾನೆಯ ಕೈಗಳನ್ನು ಹಿಡಿದು—" ಮನೋಹರೇ, ಒಂದು ಪದವನ್ನು ಹಾಡು, ನಿನ್ನ ವೀಣಾವಿನಿಂದಿತ ಸ್ವರವನ್ನು ಕೇಳಿ, ತುಂಬಾ ಆನಂದಪಡುವೆನು, " ಎಂದು ಹೇಳಿದನು.

ಗುಲಸಾನೆಯು ವೀಣೆಯನ್ನು ತಕ್ಕೊಂಡು ಕುಳಿತು, ಅದನ್ನು

ಬಾರಿಸಹತ್ತಿದಳು. ತುಸುಹೊತ್ತಿನಮೇಲೆ ಅದರ ಸ್ವರದೊಡನೆ ತನ್ನ ದನಿಯನ್ನು ಕೂಡಿಸಿ, ಹಾಡಹತ್ತಿದಳು. ದೇವಲೋಕದ ಅಪ್ಸರಾಸಮಾನಳಾದ ಆ ಸುಂದರಿಯ ಕೋಕಿಲಕಂಠದಿಂದ ಹೊರಟ ಇಂಪಾದ ಗಾಯನವನ್ನು ಕೇಳಿ, ಶಿಕಂದರನು ಅತ್ಯಂತ ಮುಗ್ಧನಾಗಿ ಹೋದನು. ಶಿಕಂದರನು ತಾನಿರುವ ಮರ್ತ್ಯಲೋಕವನ್ನು ಮರೆತುಬಿಟ್ಟನು. ತಾನು ದೇವಲೋಕದಲ್ಲಿ ವಾಸಿಸುತ್ತಿರುವೆನೆಂದೂ, ತನ್ನೆದುರಿನಲ್ಲಿ ಅಪ್ಸರೆಯರು ಗಾಯನಮಾಡುತ್ತಿರುವರೆಂದೂ ಅವನಿಗೆ ಭಾಸವಾಗಹತ್ತಿತು. ಗುಲಸಾನೆಯು ಆ ಹಾಡು ಮುಗಿದಬಳಿಕ ವೀಣೆಯನ್ನೊತ್ತಟ್ಟಿಗಿರಿಸಿ, ಸಿರಾಜಿಯಿಂದ ಪೂರ್ಣವಾದ ಬಂಗಾರದಪಾತ್ರೆಯನ್ನು ಪುನಃ ಶಿಕಂದರನ ಮುಖದ ಎದುರಿಗೆ ಹಿಡಿದಳು. ಶಿಕಂದರನು ಅದನ್ನು ಸಂಪೂರ್ಣವಾಗಿಕುಡಿದು ಪಾತ್ರೆಯನ್ನು ಕೆಳಗಿರಿಸಿದನು.

ಕ್ರಮವಾಗಿ ಶಿಕಂದರನಿಗೆ ಅಮಲುಬರಹತ್ತಿತು. ಅವನ ಕಣ್ಣು ಮುಚ್ಚತೊಡಗಿದವು. ಬಾಹ್ಯಜ್ಞಾನವು ಲೋಪವಾಗಹತ್ತಿತು. ಅವನು ಹುಚ್ಚನಂತೆ ಏಕದೃಷ್ಟಿಯಿಂದ ಗುಲಸಾನೆಯನ್ನು ನೋಡುತ್ತ ಬಿದ್ದುಕೊಂಡುಬಿಟ್ಟನು. ಗುಲಸಾನೆಯು ಶಿಕಂದರನ ಈ ಅವಸ್ಥೆಯನ್ನು ತಿಳಿದಳು. ಮದಿರೆಯ ಪ್ರಭಾವದಿಂದ ವೀರಪುರುಷನು ಸಹ ಹೇಗೆ ಕೆಲಸಕ್ಕೆ ಬಾರದವನಾಗಿಹೋಗುವನೆಂಬದನ್ನು ಪ್ರತ್ಯಕ್ಷನೋಡಿದಳು. ಕರ್ತವ್ಯಜ್ಞಾನವಿಹೀನನನ್ನಾಗಿಮಾಡಿ ತನ್ಮೂಲಕ ಮನುಷ್ಯನ ಮನುಷ್ಯತ್ವವನ್ನು ನಾಶಗೊಳಿಸುತ್ತಲಿರುವ ವ್ಯಸನಗಳ ಭಯಂಕರತೆಯನ್ನು ಕಂಡುಕೊಂಡಳು.

ಶಿಕಂದರನ ಈ ಅವಸ್ಥೆಯನ್ನು ನೋಡಿ, ಗುಲಸಾನೆಗೆ ತುಂಬಾ ಆನಂದವಾಯಿತು. ಅವಳು ಹಾಸ್ಯಮುಖಿಯಾಗಿ—" ಖಾನಸಾಹೇಬ ಹೀಗೆ ಏಕದೃಷ್ಟಿಯಿಂದ ನನ್ನ ಮೋರೆಯಕಡೆಗೇಕೆ ನೋಡುತ್ತಿರುವಿರಿ ಅದರಲ್ಲೇನಿದೆ? " ಎಂದು ಕೇಳಿದಳು.

ಸುಂದರಿ, ಏಕೆ ನೋಡುತ್ತಿರುವಿಯೆಂದೂ, ಅದರಲ್ಲೇನಿದೆಯೆಂದೂ ಕೇಳುತ್ತಿರುವೆಯಲ್ಲವೆ? ಇದನ್ನು ನಾನೇ ಹೇಳಲೇನು? ನಿನಗೆ ತಿಳಿಯುವದಿಲ್ಲವೇನು? ನಿನ್ನ ನಿರ್ಮಾಣಕ್ಕಾಗಿ ದೇವರು ತನ್ನಕೌಶಲ್ಯವನ್ನೆಲ್ಲ ವೆಚ್ಚ

ಮಾಡಿಬಿಟ್ಟಿದ್ದಾನೆ! ನಿನ್ನ ಪ್ರತಿಯೊಂದು ಅವಯವದಲ್ಲಿ ಲಾವಣ್ಯರಸವು ಉಕ್ಕುತ್ತಲಿದೆ! ದೇವರ ಸೃಷ್ಟಿಯಲ್ಲಿ ಅಪೂರ್ವ ವಸ್ತುವಾಗಿದ್ದ ನಿನ್ನನ್ನು ಈ ಮೋರೆಗೆ ನೋಡುತ್ತಿರುವದರಲ್ಲಿ ಆಶ್ಚರ್ಯವೇನು?

ಗುಲಸಾನೆಯು ತನ್ನ ಅಧರದಲ್ಲಿ ಮಿನುಗುನಗೆಯನ್ನು ತಂದುಕೊಂಡು—ಸಾಹೇಬ, ನಿಜವಾಗಿಯೂ ನಾನು ಇಷ್ಟೊಂದು ಸುಂದರಿಯಾಗಿರುವೆನೆ? ನಾನು ದಿನಾಲು, ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳುತ್ತೇನೆ; ಆದರೆ ಆ ಕನ್ನಡಿಯು ನನಗೆ ಹೀಗೆ ಹೇಳಲೊಲ್ಲದು. ನನ್ನ ಪತಿಯು ದಿನಾಲು ಮುಖವನ್ನು ನೋಡುತ್ತಾನೆ; ಆದರೆ ಅವನು ನನ್ನ ಈ ಅಪರೂಪರೂಪವನ್ನು ಪ್ರಶಂಸಿಸುವದಿಲ್ಲ. ಈ ರೂಪದಲ್ಲೇನಿದೆ? ಈ ರೂಪವನ್ನು ನೋಡಿ, ನೀವು ಈಮೋರೆಗೆ ಮರುಳಾದುದನ್ನು ತಿಳಿದು ನನಗೆ ತುಂಬಾ ಆಶ್ಚರ್ಯವಾಗುತ್ತಿರುವದು! ಅದಿರಲಿ, ಇಂದು ಅತಿಥಿಗಳಾದ ನಿಮ್ಮನ್ನು ಸರ್ವಪ್ರಕಾರದಿಂದಲೂ ಸಂತೋಷಗೊಳಿಸುವದು ನನ್ನ ಕರ್ತವ್ಯವು. ಇದಕ್ಕಾಗಿ ನಾನೇನುಮಾಡಲಿ, ಹೇಳಿರಿ. ಇನ್ನೊಂದು ಪದವನ್ನು ಹಾಡುವೆನು. ಕೇಳುವಿರೇನು? ಎಂದು ಅಂದಳು.

ಗುಲಸಾನೆಯು ಮತ್ತೆ ವೀಣೆಯನ್ನು ತೆಗೆದುಕೊಂಡು ಗಾಯನವನ್ನಾರಂಭಿಸಿದಳು. ಜಾಗೃತ—ಸ್ವಪ್ನಾವಸ್ಥೆಗಳ ಮಧ್ಯದಲ್ಲಿರುವ ಶಿಕಂದರನು ಅದನ್ನು ಕೇಳಿದನು. ಆ ಕೋಣೆಯು ಗುಲಸಾನೆಯ ಮನೋಹರವಾದ ಧ್ವನಿ—ಲಹರಿಗಳಿಂದ ತುಂಬಿಹೋಗಿತ್ತು. ಶಿಕಂದರನು ತನ್ನ ಅವಸ್ಥೆಯನ್ನು ಸಂಪೂರ್ಣವಾಗಿ ಮರೆತುಬಿಟ್ಟನು. ಅವನು ತನ್ನಲ್ಲಿಯೇ ಅಂದುಕೊಂಡನು—"ಕರ್ತವ್ಯವು ಹಾಳಾಗಿ ಹೋಗಲಿ! ಪ್ರಭುಭಕ್ತಿಯು ಇಲ್ಲದಂತಾಗಲಿ! ಮಾನ—ಮರ್ಯಾದೆಗಳು ನಾಶವಾಗಿಹೋಗಲಿ! ಈ ಕಡೆಗೆ ನಾನು ಕಣ್ಣೆತ್ತಿಸಹ ನೋಡಲಾರೆನು! ಈ ಸುಂದರಿಯ ಸಹವಾಸವೊಂದಾದರೆ ಸಾಕು! ! ನನಗೆ ಬೇರೆ ಏನೂ ಬೇಕಾಗಿಲ್ಲ! ! !"

ಗುಲಸಾನೆಯು ವೀಣೆಯನ್ನು ಕೆಳಗಿಟ್ಟಳು. ಶಿಕಂದರನ ದುರವಸ್ಥೆಯನ್ನು ತಿಳಿದು—" ಖಾನಸಾಹೇಬ, ನನಗೆ ತುಸು ಕೆಲಸವದೆ. ಅಪ್ಪಣೆಕೊಡಿರಿ. ಅದನ್ನು ತೀರಿಸಿಕೊಂಡು ಬಂದು ಪುನಃ ನಿಮ್ಮ ಸೇವೆ

ಯನ್ನು ಮಾಡುವೆನು," ಎಂದು ಹೇಳಿ, ಹೊರಟುಹೋದಳು. ಶಿಕಂದ ರನು ಅವಳನ್ನು ತಡೆಯಬೇಕೆಂದುಇಚ್ಛಿಸಿದನು. ಅವನಲ್ಲಿ ಶಕ್ತಿಯೇ ಇರ ಲಿಲ್ಲ. ಅವನು ಮೋಹಾಚ್ಛನ್ನನಾಗಿ ಹಾಗೆಯೇ ಬಿದ್ದುಕೊಂಡಿರಬೇಕಾ ಯಿತು.

ಶಿಕಂದರನಿಗ ನಿದ್ದೆಯು ಹತ್ತಲಿಲ್ಲ; ಎಚ್ಚರವೂ ಇರಲಿಲ್ಲ. ಇವೆರಡು ಗಳ ನಡುವಿನ ತಂದ್ರಾವಸ್ಥೆಯಲ್ಲಿ ಅವನಿದ್ದನು. ಈ ದುರವಸ್ಥೆಯಲ್ಲಿ ಅವನು ಒಂದು ನೋಟವನ್ನು ನೋಡಿದನು—ಸ್ವರ್ಗದ ಒಂದು ಕೋಣೆಯಲ್ಲಿ ತಾನು ಕುಳಿತಂತೆಯೂ, ತನ್ನ ಸುತ್ತಲೂ ನೂರಾರು ಅಪ್ಸರೆಯರು ನಿಂತಿ ರುವಂತೆಯೂ ಅವನಿಗೆ ಭಾಸವಾಯಿತು. ಸ್ವರ್ಗಲೋಕದ ಆ ಕೋಣೆ ಯಲ್ಲಿ ಸುವಾಸನೆಯು ಅನೇಕ ಹೂಗಳು ಇದ್ದವು. ಕೆಲವು ಮಾಲಾಕಾರ ವಾಗಿ ಗೋಡೆಗೆ ಇಳಿಬಿದ್ದಿದ್ದವು. ಬೇರೆ ಕೆಲವು ವ್ಯವಸ್ಥೆಯಿಂದ ನೆಲದ ಮೇಲೆ ಇರಿಸಲ್ಪಟ್ಟಿದ್ದವು. ಮತ್ತೆ ಕೆಲವು ಮನೋಹರವಾದ ಬೆಳ್ಳಿಯ ಪಾತ್ರೆಗಳಲ್ಲಿ ಶೋಭಾಯಮಾನವಾಗಿದ್ದವು. ಅನೇಕ ವಾದ್ಯಗಳು ಗೋಡೆಗೆ ಇಳಿಬಿದ್ದಿದ್ದವು. ಸುಂದರಿಯರಲ್ಲನೇಕರಕೈಯಲ್ಲಿ ಸತಾರ, ವೀಣೆ ಮೊದಲಾದ ನಾನಾತರದ ವಾದ್ಯಗಳಿದ್ದು, ಅವನ್ನವರು ಬಾರಿಸುತ್ತಿದ್ದರು. ಬೇರೆ ಕೆಲವರು ಹಾಡುತ್ತಿದ್ದರು. ಇವರಲ್ಲಿಯ ಶ್ರೇಷ್ಠತಮ ಸುಂದರಿಯು ಶಿಕಂದರನಿಗೆ ಸಿರಾಜಿಯನ್ನು ಕೊಡುವದಕ್ಕೆ ಮುಂದುಬಂದಳು. ಶಿಕಂದರನು ಅವ ಳನ್ನು ದಿಟ್ಟಿಸಿನೋಡಿದನು. ಅವಳು ಅಪ್ಸರೆಯಾಗಿರದೆ, ಗುಲಸಾನೆಯಾ ಗಿರುವಳೆಂಧು ಅವನ ಮನವರಿಕೆಯಾಯಿತು. ಶಿಕಂದರನು ವಿಚಾರಕ್ಕೊ ಳಗಾದನು. ಗುಲಸಾನೆಯು ನಿಜವಾಗಿಯೇ ಅಪ್ಸರೆಯಾಗಿರಬಹುದೇನು? ಎಂದು ಅವನು ಯೋಚಿಸಿದನು. ಅವನು ಆ ವೇಗಭರದಿಂದ ಅವಳನ್ನ ಪ್ಪಿಕೊಳ್ಳುವದಕ್ಕೆ ಕೈಗಳನ್ನು ಚಾಚಿದನು. ಅವಳು ಅತಿಶಯಸಿಟ್ಟಿಗೆದ್ದಳು. ಪ್ರಫುಲ್ಲವಾದ ಅವಳ ಮುಖದಲ್ಲಿ ಸಿಟ್ಟಿನ ಚಿಹ್ನವು ಸ್ಪಷ್ಟವಾಗಿ ತೋರಹ ತ್ತಿತು. ಅವಳು ಹುಬ್ಬುಗಂಟಿಕ್ಕಿ ಶಿಕಂದರನನ್ನು ಕುರಿತು—" ನರಾ ಧಮಾ, ಕರ್ತವ್ಯವನ್ನು ಮರೆತು, ಧರ್ಮವನ್ನು ಬದಿಗಿರಿಸಿ, ಪರಸ್ತ್ರೀಯಳ ಮೇಲೆ ಕಾಮುಲೋಲುಪಕಟಾಕ್ಷಗಳನ್ನೆಸೆಯುತ್ತಿರುವೆಯಾ? ಛೀ! ಛೀ!

ನಿನಗೆ ಶತಧಿಃಕ್ಕಾರವಿರಲಿ!! ಇದು ಸ್ವರ್ಗಲೋಕವು. ಪಾಪಪೂರ್ಣವಾದ ಪೃಥ್ವಿಯಿದಲ್ಲ! ಇಲ್ಲಿ ನಿನಗೆ ಸ್ಥಳವುಸಿಗಲಾರದು! ನಿನ್ನ ನೀಚಕೆಲಸಕ್ಕಾಗಿ ಇಲ್ಲಿ ನಿನಗೆ ಐದು ಒದಿಕೆಗಳು ಬಹುಮಾನವಾಗಿ ಸಿಗುವವು! ತೆಗೆದುಕೊಂ ಡುನಡೆಯತ್ತ!! " ಎಂದು ಹೇಳಿ ಒದ್ದು ದೂಡಿಬಿಟ್ಟಳು. ಶಿಕಂದರನು ಕೆಳಗೆ ಬಿದ್ದುಬಿಟ್ಟನು. ಇದರಿಂದವನಿಗೆ ಎಚ್ಚರಿಕೆಯುಂಟಾಯಿತು. ಅವನು—" ಗುಲಸಾನಾ, ಗುಲಸಾನಾ" ಎಂದು ಗಟ್ಟಿಯಾಗಿ ಒದರಿದನು. ಯಾರೂ ಉತ್ತರಕೊಡಲಿಲ್ಲ.

ಶಿಕಂದರನು ಕಣ್ಣುತೆರೆದು ನೋಡಿದನು. ಸುತ್ತಲೂ ಅಂಧಃಕಾ ವುವ್ಯಾಪಿಸಿತ್ತು. ಅವನಿಗೆ ಏನೂ ಕಾಣಿಸಲಿಲ್ಲ. ತಾನೆಲ್ಲಿರುವೆನೆಂಬದು ಗೊತ್ತಾಗಲಿಲ್ಲ. ಅವನು ಕೈಗಳನ್ನಾಡಿಸುತ್ತ ಬಾಗಿಲವು ಎಲ್ಲಿರುವದೆಂಬ ದನ್ನು ಹುಡುಕಹತ್ತಿದನು; ಆದರೆ ಬಾಗಿಲವು ಸಿಗಲಿಲ್ಲ. ಅವನು ಯಾರು ತನಗೀ ಅವಸ್ಥೆಯನ್ನುಂಟು ಮಾಡಿರಬಹುದೆಂದು ಯೋಚಿಸಹತ್ತಿದನು. ಇದು ಗುಲಸಾನೆಯ ಕೆಲಸವಾಗಿರಬಹುದೇನು? ಎಂದು ಅವನು ಭಾವಿಸಿ ದನು; ಆದರೆ ಇದು ಅವನಿಗೆ ಸಂಭವಪರವಾಗಿ ತೋರಲಿಲ್ಲ. ಅವನು ಮತ್ತೆ—" ಗುಲಸಾನಾ, ಗುಲಸಾನಾ" ಎಂದು ಚೀತ್ಕಾರ ಮಾಡಿದನು.

ಹೊರಗಿರುವ ಕಾವಲುಗಾರನು ಶಿಕಂದರನ ಚೀತ್ಕಾರಕ್ಕೆ ಉತ್ತರ ವಾಗಿ— " ಗರ್ವಿಷ್ಠನಾದ ದುರ್ಗಾಧಿಪತಿಯೇ, ಏಕೆ ಸುಮ್ಮನೆ ಕೂಗಿಕೊ ಳ್ಳುತ್ತಿರುವೆ? ಗುಲಸಾನೆಯು ಇಲ್ಲೆಲ್ಲಿ ಬರಬೇಕು? ಅವಳು ಸೆರೆಯಾಳಾಗಿ ರಂಗಮಹಲಿನ ಹಾದಿಯನ್ನು ಹಿಡಿದಿದ್ದಾಳೆ. ನೀನೂ ನಾಳೆ ಮುಂಜಾವಿ ನಲ್ಲಿ ಆಗ್ರಾಕ್ಕೆ ಹೊರಡಬೇಕು. ಈಗ ನೀನು ಕೈದಿಯು. ಇಲ್ಲಿಂದ ಹೊರ ಬೀಳುವದಕ್ಕಾಗಲಿ, ಇತರರೊಡನೆ ಮಾತಾಡುವದಕ್ಕಾಗಲಿ ನಿನಗೆ ಸ್ವಾತಂ ತ್ರ್ಯವಿಲ್ಲ, " ಎಂದು ಹೇಳಿದನು.

ಶಿಕಂದರನು ಈ ಸ್ವರವನ್ನು ಗುರುತಿಸಿದನು. ಈ ದನಿಯು ತನ್ನ ಸೈನಿಕರಲ್ಲಿ ಒಬ್ಬನಾದ ಜಾಫರಅಲ್ಲಿಯದೆಂದು ಅವನು ಕಂಡುಹಿಡಿದನು. ಕೂಡಲೆ ಅವನಿಗೆ ಪ್ರಕೃತಘಟನಾವಳಿಯ ರಹಸ್ಯವು ಹೊಳೆಯಿತು. ಅವನು ತನಗೆ ತಾನೇ ಅಂದುಕೊಂಡು-ಶೂರನೆಂದೂ, ಜಾಣನೆಂದೂ ಅಭಿಮಾನಬ

ಡುತ್ತಲಿದ್ದ ಶಿಕಂದರನೆ, ನೀನು ಮೋಸಹೊಂದಿರುವೆ. ದುಷ್ಟೆಯಾದ ಗುಲಸಾನೆಯು ನಿನ್ನನ್ನು ವಂಚಿಸಿ, ಪಾರಾಗಿಹೋಗಿದ್ದಾಳೆ. ಅವಳ ರೂಪಕ್ಕೆ ಮೋಹಿತನಾದ ನೀನು ಅವಳ ಬಳಿಯಲ್ಲಿ ಸಿಕ್ಕು ಈಸಂಕಟವನ್ನು ಹೊಂದಿರುವೆ. ರೂಪದಿಂದ ಉನ್ಮತ್ತನಾಗಿ ಗುಲಸಾನೆಯ ಮಾತನ್ನು ನಂಬಿದನೀನು ಶುದ್ಧ ಮೂರ್ಖನು!

ತರುವಾಯ ಅವನು ಕಾವಲುಗಾರರನ್ನು ಕುರಿತು—ಜಾಫರಅಲ್ಲಿ, ನೀನು ನನ್ನನ್ನು ಗುರುತಿಸುವದಿಲ್ಲವೇ? ನಾನು ನಿನ್ನ ಒಡೆಯನಾದ ಶಿಕಂದರಖಾನು—ಅಕಬರಬಾದಶಹನ ಸೇನಾಪತಿಯು. ಕೆಲಸವು ಕೆಟ್ಟು ಹೋಗಿದೆ. ದುಷ್ಟೆಯಾದ ಗುಲಸಾನೆಯು ಮೋಸಮಾಡಿ ಪಾರಾಗಿದ್ದಾಳೆ. ಅವಳೊಡನೆ ಸೋಹಾನಿಯೂ ಪಾರಾಗಿ ಹೋಗಿದ್ದಾನೆ. ಲಗು ಬಾಗಿಲ ತೆರೆ, ಎಂದು ಹೇಳಿದನು.

ಜಾಫರಅಲ್ಲಿಯು ಶಿಕಂದರನ ಮಾತಿನ ಕಡೆಗೆ ಲಕ್ಷಗೊಡಲಿಲ್ಲ. ಸೋಹಾನಿಯು ತನ್ನನ್ನು ವಂಚಿಸುವದಕ್ಕಾಗಿ ಈ ಮೇರೆಗೆ ಮಾತಾಡುತ್ತಿರುವನೆಂದು ಅವನು ತಿಳಿದನು. ಶಿಕಂದರನು ಬಲವಾಗಿ ಕೂಗಿದನು. ತನ್ನ ಸೈನಿಕರಲ್ಲಿಯ ಅನೇಕರ ಹೆಸರು ತಕ್ಕೊಂಡು ಕರೆದನು. ಯಾರೂ ಅವನಿಗೆ ಉತ್ತರಕೊಡಲಿಲ್ಲ. ಶಿಕಂದರನ ಕೂಗಿನ ಪ್ರತಿಧ್ವನಿಯು ಅವನಿಗೆ ಕೇಳಿಸಹತ್ತಿತು. ಆ ಪ್ರತಿಧ್ವನಿಯು ತನ್ನನ್ನು ತಿರಸ್ಕರಿಸುವದೆಂದು ಶಿಕಂದರನಿಗೆ ಬೋಧೆಯಾಯಿತು. ಅವನು ತನ್ನ ಮೂರ್ಖತನಕ್ಕೆ ಹಣೆ ಹಣೆ ಬಡಕೊಳ್ಳುತ್ತ ಕುಳಿತುಕೊಳ್ಳಬೇಕಾಯಿತು.

## ಏಳನೆಯ-ಪರಿಚ್ಛೇದ.

ಮರುದಿವಸ ಮುಂಜಾವಿನಲ್ಲಿ ಜಾಫರಅಲ್ಲಿಯು ಹೊರಗಿನಿಂದಲೇ— «ಸೋಹಾನೀಸಾಹೇಬ, ನಮ್ಮ ಸೇನಾಪತಿಗಳಾದ ಶಿಕಂದರಖಾನರವರು

ನಿನ್ನನ್ನು ಸೆರೆಹಿಡಿದುಕೊಂಡು ಆಗ್ರಾಕ್ಕೆ ಒಯ್ಯತಕ್ಕವರಿದ್ದಾರೆ. ನೀನು ಹೊರಡುವದಕ್ಕೆ ಸಿದ್ಧನಾಗು" ಎಂದು ಹೇಳಿದನು.

ಶಿಕಂದರನು ಸಿಟ್ಟಿನಿಂದ-ಜಾಫರ, ನಿನಗೆ ಹುಚ್ಚುಹಿಡಿಯಿತೇನು?" ಎಂದು ಕೇಳಿದನು.

ನನಗೆ ಹಿಡಿದಿಲ್ಲ. ಬಹುಶಃ ನಿಮಗೆ ಹುಚ್ಚು ಹಿಡಿದಿರಬಹುದು. ತಮ್ಮ ಶಕ್ತಿಯನ್ನರಿಯದೆ ಕೆಲಸಮಾಡುತ್ತಿರುವವರ ಹಣೇಬರಹವು ಕಡೆಗೆ ನಿನ್ನಂತೆಯೇ ಆಗುತ್ತಿರುವದು. ನಿನ್ನ ಶಕ್ತಿಯೆಷ್ಟು? ದಿಲ್ಲಿಯ ಬಾದಶಹರ ಶಕ್ತಿಯೆಷ್ಟು? ಇದನ್ನು ನೀನು ಮೊದಲು ವಿಚಾರಮಾಡಬೇಕಾಗಿತ್ತು. ಹೀಗೆಮಾಡದೆ, ಸಾಹಸಕ್ಕೆ ದುಡುಕಿದ್ದರಿಂದ ನಿನ್ನ ಅವಸ್ಥೆ ಹೀಗಾಯಿತು. ನಮ್ಮ ಸೇನಾಪತಿಗಳು ಜಾಣತನದಿಂದ ನಿನ್ನನ್ನು ಸೆರೆಹಿಡಿದಿರುವರು. ಅವರ ಅಪ್ಪಣೆಯಿಂದ ನಾನು ನಿನಗೆ ಸೂಚನೆ ಕೊಡಲಿಕ್ಕೆ ಬಂದಿದ್ದೇನೆ. ತುಸುಹೊತ್ತಿನಲ್ಲಿ ಅವರು ಬರುವರು. ನಿನ್ನನ್ನು ತೆಗೆದುಕೊಂಡು ಹೋಗುವರು.

ಶಿಕಂದರನ ಸಿಟ್ಟು ಮತ್ತಿಷ್ಟು ಹೆಚ್ಚಾಯಿತು. ಅವನು ಕ್ರೋಧ ಕಂಪಿತಸ್ವರದಿಂದ— ಜಾಫರ, ಮೈಮೇಲೆ ಎಚ್ಚರವದೆಯೋ ಇಲ್ಲವೊ? ನಿನ್ನೆ ರಾತ್ರಿಯಲ್ಲಿ ನೀನು ಮಿತಿಮೀರಿ ಅಫು ಸೇವಿಸಿದಂತೆ ತೋರುತ್ತದೆ ನೆಟ್ಟಗೆ ನೋಡು. ನಾನೇ ನಿಮ್ಮ ಸೇನಾಪತಿಯು. ಎಂದು ಹೇಳಿದನು.

ಏನು? ನೀವು ನಮ್ಮ ಸೇನಾಪತಿಗಳೇ? ಒಳಿತಾಯಿತು, ಸುಮ್ಮನೆ ಕುಳಿತುಕೊಳ್ಳಿರಿ! ಹೀಗೆ ಹುಚ್ಚರಂತೆ ವರ್ತಿಸಿದರೆ ನಿಮ್ಮ ಬಿಡುಗಡೆಯಾದೀತೆಂದು ತಿಳಿದಿರುವಿರೇನು?

ಶಿಕಂದರನು ತುಸು ಶಾಂತನಾಗಿ—ಜಾಫರಲ್ಲಿ, ಹುಡಗಾಟಕೆಯ ಸಮಯವಿದಲ್ಲ. ಚನ್ನಾಗಿ ವಿಚಾರಮಾಡು. ನಾನು ನಿಮ್ಮ ಸೇನಾಪತಿಯು. ಶತ್ರುಗಳ ಕೌಶಲ್ಯದಿಂದ ನಾನು ಇಲ್ಲಿ ಬಂದಿಯಾಗಿದ್ದೇನೆ. ಸೋಹಾನಿಯು ಓಡಿಹೋಗಿದ್ದಾನೆ. ನಾವು ಬಹಳ ಸಂಕಟದಲ್ಲಿ ಸಿಕ್ಕಿದ್ದೇವೆ. ತೀವ್ರವೇ ಬಾಗಿಲತೆಗೆ, " ಎಂದು ಹೇಳಿದನು.

ಏನಿರುವದೋ ನೋಡಬೇಕೆಂದು ತಿಳಿದು ಜಾಫರನು ಬಾಗಿಲವನ್ನು ತೆರೆದನು. ಅವನ ಕೈಯಲ್ಲಿ ಉರಿಯುತ್ತಿರುವ ಕಕ್ಕಡವಿತ್ತು. ಅದರ ಸಹಾಯದಿಂದ ಅವನು ಶಿಕಂದರನನ್ನು ಗುರುತಿಸಿದನು. ತಾನು ಈವರೆಗೆ ಆಚರಿಸಿದ್ದು ತೀರ ಅನ್ಯಾಯವಾಯಿತೆಂದು ಎಣಿಸಿದನು. ಇದಕ್ಕಾಗಿ ತನಗೆ ಸೇನಾಪತಿಯಿಂದ ಕಠಿಣ ಶಿಕ್ಷೆಯು ದೊರೆಯಬಹುದೆಂದು ಭೀತನಾದನು. ಅವನು ಕೈಜೋಡಿಸಿ,— " ಜನಾಬ, ಇದೇನು? ತಾವು ಈ ಅವಸ್ಥೆಯಲ್ಲಿ ಇಲ್ಲೇಕಿರುವಿರಿ? ನೀವು ಈ ಬಟ್ಟೆಗಳನ್ನೇಕೆ ಧರಿಸಿರುವಿರಿ? ನಿನ್ನೆ ರಾತ್ರಿಯಲ್ಲಿ ನೀವು ಕೋಟೆಯಿಂದ ಹೊರಬಿದ್ದುಹೋದುದನ್ನು ನಾನು ಪ್ರತ್ಯಕ್ಷವಾಗಿ ನೋಡಿದ್ದೇನೆ! " ಎಂದು ಅಂದನು.

ಶಿಕಂದರನು ಏನೆಂದು ಹೇಳುವನು? ಅವನು ಗುಲಸಾನೆಯ ಚಾತುರ್ಯದ ಒಂದೊಂದೇ ಕೃತಿಯನ್ನು ನೆನೆಯಹತ್ತಿದನು. ಗುಲಸಾನೆಯು ಬಟ್ಟೆಗಳನ್ನು ತೆಗೆಯಿಸಿ ಇಟ್ಟದ್ದರ ಹಾಗೂ ಪ್ರೇಮದ ಆವಿರ್ಭಾವದಿಂದ ಮಿತಿಮೀರಿ ಮದ್ಯವನ್ನು ಕುಡಿಸಿದ್ದರ ಇಂಗಿತವು ಈಗ ಶಿಕಂದರನಿಗೆ ಗೊತ್ತಾಯಿತು. ಅವನು ತನ್ನ ಮೂರ್ಖತನವನ್ನು ತಾನೇ ಹಳಿದುಕೊಳ್ಳಹತ್ತಿದನು.

ಶಿಕಂದರನು ಮದಿರೆಯ ಸೇವನೆಯಿಂದ ಮೈಮರೆದು ಬಿದ್ದ ಬಳಿಕ ಗುಲಸಾನೆಯು ಅವನ ವಸ್ತ್ರಗಳನ್ನೂ, ಆಯುಧಗಳನ್ನೂ ತೆಗೆದುಕೊಂಡು ತನ್ನ ಸ್ವಾಮಿಯ ಬಳಿಗೆ ಹೋಗಿ, ಅವನನ್ನು ಎಬ್ಬಿಸಿದಳು. ಅವನಿಗೆ ಶಿಕಂದರನ ಬಟ್ಟೆಗಳನ್ನು ಹಾಕಿ, ಆಯುಧಗಳನ್ನು ಕೊಟ್ಟು, ಮುಂದೆ ಮಾಡತಕ್ಕದ್ದನ್ನು ತಿಳಿಸಿ ಕೊಟ್ಟಳು. ಸೋಹಾನಿಯು ಹೆಂಡತಿಯ ಹೇಳಿಕೆಯಂತೆ ಶಿಕಂದರನ ವೇಷವನ್ನು ಧರಿಸಿದನು. ಶಿಕಂದರನ ಮುಖಲಕ್ಷಣವೂ, ಸೋಹಾನಿಯ ಮುಖಲಕ್ಷಣವೂ ಒಂದೇ ಆಗಿತ್ತು. ಇದರಿಂದ ಸೋಹಾನಿಗೆ ಮತ್ತಷ್ಟು ಅನುಕೂಲವಾಯಿತು. ಅವನು ತನ್ನ ಹೆಂಡತಿಯನ್ನು ಶೆರೆಹಿಡಿದುಕೊಂಡು ಒಯ್ಯುವವನಂತೆ ನಟಿಸಿ, ಮೊಗಲ ಸೈನಿಕರಿಗೆ ಶಿಕಂದರನಂತೆ ಅಧಿಕಾರಯುಕ್ತವಾಣಿಯಿಂದ ಅಪ್ಪಣೆ ಮಾಡಿ, ದುರ್ಗದಿಂದ

ಹೊರಬಿದ್ದು ಹೋದನು.

ಶಿಕಂದರನು ಗುಲಸಾನೆಯ ಈ ಚಾತುರ್ಯದ ಕೆಲಸವನ್ನು ತರ್ಕಿಸಿದನು. ಈ ಬಗ್ಗೆ ತನ್ನ ಸೈನಿಕರನ್ನು ವಿಚಾರಿಸಿದನು. ಸೈನಿಕರ ಉತ್ತರಗಳಿಂದ ತನ್ನ ಈ ತರ್ಕವು ನಿಜವಾದದ್ದೆಂದು ಮನಗಂಡನು. ತರುವಾಯ ಅವನು ವಿಶ್ರಾಂತಿಗೃಹದಿಂದ ತನ್ನ ಬೇರೆ ಬಟ್ಟೆಗಳನ್ನು ತರಿಸಿ, ಅವನ್ನು ಧರಿಸಿದನು. ಅರಮನೆಯನ್ನೆಲ್ಲ ಶೋಧ ಮಾಡಿದನು. ಅಲ್ಲಿ ಯಾರೂ ಇರಲಿಲ್ಲ. ಆ ಭವ್ಯವಾದ ಅರಮನೆಯು ಜನಶೂನ್ಯವಾಗಿ ಹೋಗಿತ್ತು. ಇದನ್ನು ನೋಡಿ, ಶಿಕಂದರನು ಹಲ್ಲು ಕಡಿಯುತ್ತ ಮನಸ್ಸಿನಲ್ಲಿಯೇ—ಎಲೆ, ದುಷ್ಟಸ್ತ್ರೀಯೇ, ನೀನು ನನ್ನನ್ನು ಸಂಪೂರ್ಣವಾಗಿ ವಂಚಿಸಿದೆ! ನಾನು ಇದರ ಸೇಡನ್ನು ತೀರಿಸಿಕೊಳ್ಳದೆಬಿಡೆನು!! ಎಂದು ಅಂದುಕೊಂಡನು.

ಶಿಕಂದರನು ಪುನಃ ಮೊದಲು ತಾನಿದ್ದ ಕೋಣೆಗೆ ಬಂದನು. ಆ ಕೋಣೆಯನ್ನು ಸೂಕ್ಷ್ಮವಾಗಿ ಪರೀಕ್ಷಿಸತೊಡಗಿದನು. ಈ ಸಮಯದಲ್ಲಿ ಅವನಿಗೆ ಕೆಂಪುವರ್ಣದ ಕಾಗದದ ಚೀಟಿಯೊಂದು ಸಿಕ್ಕಿತು. ಅವನು ಅದನ್ನು ತೆಗೆದುಕೊಂಡು ಓದತೊಡಗಿದನು. ಅದರಲ್ಲಿ ಬರೆದದ್ದೇನಂದರೆ—

‘‘ಮೊಗಲ,

ಸಾಮಾನ್ಯವಾದುದೊಂದು ಚಿತ್ರವನ್ನುನೋಡಿ, ರೂಪಕ್ಕೆಮೋಹಿಸಿ, ಉನ್ಮತ್ತವಾಗುವವನಿಗೆ ನಿನ್ನಂತೆಯೇ ಶೋಚನೀಯ ಅವಸ್ಥೆಯುಂಟಾಗುವದು ಸಹಜೀಕವೇ. ನಾನು ನಿನ್ನ ಮೂರ್ಖತನದ ಉಪಯೋಗ ಮಾಡಿಕೊಂಡು, ನನ್ನ ಪತಿಯನ್ನು ಪಾರು ಮಾಡಿದ್ದೇನೆ. ಅಕಬರ ಬಾದಶಹನ ಸೇನಾಪತಿಯಾದ ನೀನು ಕರ್ತವ್ಯವನು ಮರೆದು ಪರಸ್ತ್ರೀಯಲ್ಲಿ ಆಸಕ್ತಿಯನ್ನು ಹೊಂದಲು ಮನಸ್ಸು ಮಾಡಿದೆ! ಒಡೆಯನ ಋಣವನ್ನು ಮರೆತು, ವಿಶ್ವಾಸಘಾತುಕತನದಿಂದ ಒಬ್ಬ ಕ್ಷುದ್ರ ಹೆಂಗಸಿನ ಮಾನಭಂಗಕ್ಕೆ ಉದ್ಯುಕ್ತನಾದೆ! ಇಂಥ ನೀನು ಅತ್ಯಂತ ನೀಚನು! ಸೇನಾಪತಿಯೆಂಬ ಪದವಿಗೆ

ಅಯೋಗ್ಯನು! ನಮ್ಮನ್ನು ಸೆರೆಹಿಡಿದುಕೊಂಡು ಹೋಗಲು ಬಂದ ನೀನು ಇಂದು ನಮ್ಮ ಸೆರೆಯಾಳಾಗಿರುವೆ. ಇನ್ನುಮೇಲಾದರೂ ಬುದ್ಧಿಗಲಿ. ಎಚ್ಚರಿಕೆಯಿಂದ ಕೆಲಸಮಾಡು. ಕುಲಸ್ತ್ರೀಯರ ಚಿತ್ರ ವನ್ನು ನೋಡಿ, ಮೋಹಿತನಾಗುವ ಉದ್ಯೋಗವನ್ನು ಇನ್ನು ಮೇಲೆ ಎಂದೂ ಮಾಡಬೇಡ. ಪತಿವ್ರತೆಯರಿಗೆ ಪತಿಯ ಸಮಾನವಾದ ವಸ್ತು ವು ಬೇರೊಂದಿಲ್ಲ. ಅವರು ತಮ್ಮ ಪತಿಗೋಸಗ ಮಾಡದೇಯಿದ್ದ ಕೆಲಸವಿಲ್ಲ. ಪಾತಿವ್ರತ್ಯವನ್ನು ಹಾಳುಮಾಡಲು ಬಂದ ನಿನ್ನಂಥ ನೀಚ ನನ್ನು ಅವರು ನಾಶ ಮಾಡದೆ ಬಿಡರು. ನೀನು ಐದು ಒದಿಕೆಗಳ ವಿನಿಮಯದಿಂದ ನನ್ನ ಚಿತ್ರವನ್ನು ಮಾರಲಿಕ್ಕೆ ತೆಗೆದುಕೊಂಡಿದ್ದೆ ಯಷ್ಟೆ? ನಾನು ಈ ಐದುಒದಿಕೆಗಳನ್ನು ಮುಟ್ಟಿಸಿದ್ದೇನೆ. ಆದರೆ ಇಷ್ಟ ರಿಂದಲೇ ನಿನ್ನ ದುರ್ದೆಶೆಯು ತೀರಿತೆಂದು ಭಾವಿಸಬೇಡ. ಅಕಬರ ಬಾದಶಹನು ನಿನ್ನ ಈ ಕೃತ್ಯಕ್ಕೆ ತಕ್ಕ ಸಂಭಾವನೆಯನ್ನು ಮಾಡು ವನು. ಅದು ಚಿತ್ರದಬೆಲೆಯೆಂದೇ ಭಾವಿಸು! ನೀನು ಈ ಪತ್ರವನ್ನು ಓದುತ್ತಿರುವಾಗ ನಾವು ನಿನ್ನಿಂದ ಬಹಳ ದೂರದಲ್ಲಿರುತ್ತೇವೆಂಬ ದನ್ನು ಮರೆಯಬೇಡ. ಸಿಂಹವು ಪಂಜರದಿಂದ ಬಿಡುಗಡೆಯನ್ನು ಹೊಂದಿದೆ. ಇನ್ನು ಅದನ್ನು ಹಿಡಿಯುವರಾರು?

ಗುಲಸಾನಾ.''

ಶಿಕಂದರನು ಪತ್ರವನ್ನೋದಿಕೊಂಡನು. ಸಿಟ್ಟಿನಿಂದ ಅದನ್ನು ಚೂರುಚೂರಾಗಿ ಹರಿದು ಬಿಸಾಟಿಬಿಟ್ಟನು. ಅವನು ಯಾವದೇ ರೀತಿ ಯಿಂದಾಗಲಿ ಗುಲಸಾನೆಯನ್ನು ಹಿಡಿಯಬೇಕೆಂದು ನಿರ್ಧಾರಮಾಡಿ ಕೊಂಡನು. ಹೊರಗೆ ಬಂದು ತನ್ನ ಸೈನಿಕರನ್ನು ಕರೆದು—ನೀವು ಬೇರೆಬೇರೆ ದಿಕ್ಕಿಗೆ ಹೋಗಿ, ಸೋಹಾನಿಯನ್ನು ಹುಡುಕಿರಿ. ಇದ್ದಲ್ಲಿಂದ ಅವನನ್ನು ಹಿಡಿದುಕೊಂಡು ಬರ್ರಿ. ಅವನನ್ನು ತೆಗೆದುಕೊಂಡು ಹೋಗದಿದ್ದರೆ ನಮ್ಮ ಅವಸ್ಥೆಯು ನೆಟ್ಟಗಾಗುವಂತಿಲ್ಲ. ನಾವೆಲ್ಲರೂ ಬಾದಶಹನ ಕ್ರೋಧಕ್ಕೆ ಆಹುತಿಯಾಗಬೇಕಾಗುವದು, ಎಂದು ಹೇಳಿ ದನು. ಶಿಕಂದರನ ಅಪ್ಪಣೆಯಂತೆ ಸೈನಿಕರು ಸೋಹಾನಿಯನ್ನು

ಹುಡುಕುವವಕ್ಕೆ ಹೊರಟರು. ಶಿಕಂದರನು ವಿಶ್ರಾಂತಿಗೃಹಕ್ಕೆ ಹೋಗಿ, ಅಲ್ಲಿ ಏನಾದರೂ ಗೊತ್ತಾಗಬಹುದೇ ಹೇಗೆಂಬದನ್ನು ನೋಡಬೇಕೆಂದು ಗೊತ್ತುಮಾಡಿಕೊಂಡನು. ಅದರಂತೆ ಅವನು ಆ ಕಡೆಗೆ ಹೊರಟನು.

ಸೇಖಜಿಯು, ತನ್ನ ಅಂಗಡಿಯಲ್ಲಿರುವದೊಂದು ಆರಾಮು ಕುರ್ಚಿಯಮೇಲೆ ವಿಷಣ್ಣಮುಖನಾಗಿ ಬಿದ್ದುಕೊಂಡಿದ್ದನು. ಶಿಕಂದರನು ಅಲ್ಲಿಗೆ ಬಂದು ಕರ್ಕಶಸ್ವರದಿಂದ ಸೇಖಜೀ, ಎಂದು ಒದರಿದನು.

ಸೇಖಜಿಯು, ವಿಸ್ಮಯದಿಂದ ಎದ್ದುನಿಂತು ಸಲಾಂಮಾಡಿ—"ಇದೇನು, ತಾವು! ಇಷ್ಟು ಲಗು ಇಲ್ಲಿಗೆ ತಿರುಗಿ ಬಂದದ್ದೇಕೆ? ಎಂದು ಕೇಳಿದನು. ಸೇಖಜಿ, ಏನನ್ನುತ್ತಿರುವೆ? ನನ್ನ ಪರಿಚಯವನ್ನು ಈಗಾಗಲೇ ಮರೆತೆಯೇನು?

ಸಾಹೇಬ, ನಾನು ನಿಮ್ಮ ಸೇವಕನು. ಹುಡುಗಾಟಿಕೆಗೆ ಯೋಗ್ಯ ಸಮಯವಿದಲ್ಲ ನಾನು ನಿಮಗೆ ಬಹಳ ಸಹಾಯಮಾಡಿದೆನು. ನನ್ನ ಸಹಾಯದಿಂದಲೇ ನೀವು ಸೋಹಾನಿಯನ್ನು ಹಿಡಿಯಲಿಕ್ಕೆ ಸಮರ್ಥರಾದಿರಿ. ಹೀಗಿರಲು ನೀವು ನನ್ನ ಉಪಕಾರಕ್ಕೆ ಈತರದ ಪ್ರತಿಫಲವನ್ನು ಕೊಡಬೇಕೇ?

ಸೇಖಜಿ, ನೀನೇನನ್ನುವೆಯೋ ನನಗೆ ತಿಳಿಯದು! ಆದದ್ದಾದರೂ ಏನಾಯಿತು, ಸ್ಪಷ್ಟವಾಗಿ ಹೇಳು.

ನೀವು ಈಗ್ಗೆ ಎರಡು ತಾಸುಗಳ ಹಿಂದೆ ಇಲ್ಲಿಗೆ ಬಂದಿದ್ದಿರಂತೆ. ಆಗ ನೀವು ನನ್ನ ಚಾಕರನನ್ನೆಬ್ಬಿಸಿ, ಕಾಫಿಯನ್ನುಕುಡಿದಿರಂತೆ. ಸೇಖಜಿಯನ್ನು ಎಬ್ಬಿಸಬೇಡವೆಂದು ಆ ಚಾಕರನಿಗೆ ಹೇಳಿ, ನೀವು ಇಲ್ಲಿಂದ ಆನಂದದಿಂದ ಹೊರಟು ಹೋದಿರಂತೆ.

ಇದನ್ನು ನಿನಗೆ ಹೇಳಿದವರಾರು?

ನಿಮಗೆ ಕಾಫಿಯನ್ನು ತಯಾರ ಮಾಡಿಕೊಟ್ಟ ಆ ಸೇವಕನೇ ಇದೆಲ್ಲವನ್ನು ಹೇಳಿದನು. ನೀವು ಕಾಫಿಕುಡಿದದ್ದೇನೂ ತಪ್ಪಾಗಲಿಲ್ಲ. ಆದರೆ ನನ್ನನ್ನು ಸರ್ವಸ್ವೀಮುಳುಗಿಸಿಬಿಟ್ಟಿರುವಿರಿ!

ಶಿಕಂದರನಿಗೆ ಅತ್ಯಂತ ವಿಸ್ಮಯವಾಯಿತು. ಸೋಹಾನಿಯ ಕೃತಿಯನ್ನು ಅನುಮಾನದಿಂದ ತರ್ಕಿಸಿದನು; ಆದರೆ ಸೇಖಜಿಯು ಮುಳುಗಿದ್ದೇತರಿಂದೆಂಬದು ಅವನಿಗೆ ತಿಳಿಯಲಿಲ್ಲ. ಶಿಕಂದರನು ಸುಮ್ಮನಿರುವದನ್ನು ನೋಡಿ, ಸೇಖಜಿಯು—ನನ್ನ ಹೆಂಡತಿಯು ಹೇಗೇ ಇರಲೊಲ್ಲಳೇಕೆ; ನಾನವಳನ್ನು ಬಹಳವಾಗಿ ಪ್ರೀತಿಸುತ್ತಿದ್ದೇನೆ. ಅವಳಿಲ್ಲದಿದ್ದರೆ ನನಗೆ ಸಮಾಧಾನವು ದೊರೆಯುವಂತಿಲ್ಲ. ನೀವು ದಯವಿಟ್ಟು ನನ್ನ ಹೆಂಡತಿಯನ್ನು ನನಗೆಕೊಟ್ಟುಬಿಡಿರಿ; ಎಂದು ದೀನವಾಣಿಯಿಂದ ಬೇಡಿಕೊಂಡನು.

ಸೇಖಜಿ, ದೇವರಾಣಿಯನ್ನು ಮಾಡಿ ಹೇಳುತ್ತೇನೆ—ಕುಲಸಮುಳಿಲ್ಲಿ ಹೋಗಿರುವಳೆಂಬದನ್ನು ನಾನರಿಯೆನು.

ಸೇಖಜಿಯು ಸಿಟ್ಟಿನಿಂದ—ಸಾಹೇಬ, ಅಕಬರಬಾದಶಹನ ಸೇನಾಪತಿಗಳಾದ ತಾವು ಇಷ್ಟೊಂದು ಹೀನಪ್ರಕೃತಿಯವರಾಗಿರಲಿಕ್ಕಿಲ್ಲೆಂದು ನನ್ನ ಭಾವನೆಯಿತ್ತು. ನನ್ನನ್ನು ವಿರಹಾಕುಲನನ್ನಾಗಿ ಮಾಡಿ, ದುಃಖಕೊಳಗಾಗುವಂತೆ ಮಾಡುವದರಿಂದ ನಿಮಗೇನು ಲಾಭವುಂಟು? ನೀವು ಈ ಮನೆಯಿಂದಹೊರಬಿದ್ದು ಹೋಗುವಕಾಲಕ್ಕೆ ನಿಮ್ಮೊಡನೆ ಒಬ್ಬ ಹೆಂಗಸಿದ್ದಳೆಂದು ನನ್ನ ಚಾಕರನು ಹೇಳಿದ್ದಾನೆ. ನಿಮ್ಮ ಸಂಗಡ ಇದ್ದ ಆ ಸ್ತ್ರೀಯು, ಕುಲಸಮಳೆಂಬದನ್ನು ನಾನು ಕಂಡು ಹಿಡಿದಿದ್ದೇನೆ. ಹೀಗಿರಲು ನೀವು ಹಾರಿಸಿಕೊಂಡು ಮಾತಾಡಿದರೆ ಕೇಳುವರಾರು? ಎಂದು ಅಂದನು.

ಶಿಕಂದರನು ಕ್ರೋಧದಿಂದಲೂ, ಮನಸ್ತಾಪದಿಂದಲೂ ಮುಷ್ಟಿಬದ್ಧವಾದ ಕೈಯನೆತ್ತಿ ಕರ್ಕಶಸ್ವರದಿಂದ—ಸೇಖಜಿ, ನೀನು ಭ್ರಾಂತನಾಗಿರುವೆ; ಇದರಿಂದ ಮೂರ್ಖತನಕ್ಕೊಳಗಾಗಿ ನನ್ನನ್ನು ಈ ಮೇರೆಗೆ ನಿಂದಿಸುತ್ತಿರುವೆ, ಕೇವಲ ನೀನೊಬ್ಬನೇ ಮೋಸಹೋಗಿರುವೆಯೆಂತಲ್ಲ; ನಾನೂ ನಿನ್ನಂತೆಯೇ ವಂಚನೆಗೊಳಗಾಗಿ ವಿಪತ್ತಿಗೊಳಗಾಗಿದ್ದೇನೆ. ರಾತ್ರಿಯಲ್ಲಿ ಇಲ್ಲಿಗೆ ಬಂದವನು ನಾನಲ್ಲ—ನನ್ನ ವಸ್ತ್ರಗಳನ್ನು ಧರಿಸಿದ ಸೋಹಾನಿಯು. ಅವನೊಡನೆ ಇದ್ದವಳು ಗುಲಸಾನೆಯು, ಎಂದು ಹೇಳಿ ರಾತ್ರಿಯಲ್ಲಿ ನಡೆದ ಯಾವತ್ತು ಸಂಗತಿಯನ್ನು ಸವಿಸ್ತಾರವಾಗಿ ತಿಳಿಸಿದನು. ಇದನ್ನುಕೇಳಿ ಸೇಖಜಿಯು ಭಯದಿಂದಲೂ, ವಿಸ್ಮಯದಿಂದಲೂಕಿಂಕರ್ತವ್ಯ

ಮೂಢನಾಗಿ ಹೋದನು.

ಶಿಕಂದರನು ವಿಶ್ರಾಂತಿಗೃಹದಲ್ಲಿದ್ದ ತನ್ನ ಕೋಣೆಗೆ ಹೋಗಿ ನೋಡಿದನು. ಗಾಬರಿಯಾಗಿ ಹೋದನು. ಕೋಣೆಯಲ್ಲಿಯ ಸಾಮಾನುಗಳು ಅತ್ತಿತ್ತ ಅವ್ಯವಸ್ಥೆಯಿಂದ ಬಿದ್ದಿದ್ದವು. ಶಿಕಂದರನು ತನ್ನ ಪೆಟ್ಟಿಗೆಯನ್ನು ತೆರೆದು ನೋಡಿದನು. ಅದರಲ್ಲಿಯ ಕೆಲವು ಕಾಗದಗಳು ಹೋಗಿಬಿಟ್ಟದ್ದವು. ಅವನು ಸೇಖಜಿಯನ್ನು ಕರೆದು ಈ ಸುದ್ದಿಯನ್ನು ಹೇಳಿದನು. ಬಾದಶಹನು ಶಿಕಂದರನಿಗೆ ಸೋಹಾನಿಯ ಸಂಬಂಧದ ಕೆಲವು ಕಾಗದಪತ್ರಗಳನ್ನು ಕೊಟ್ಟಿದ್ದನು. ಇವುಗಳನ್ನು ಶಿಕಂದರನು ಪುನಃ ಬಾದಶಹನಿಗೆ ಕೊಡಬೇಕಾಗಿತ್ತು; ಆದರೆ ಇವುಗಳಲ್ಲಿಯ ಕೆಲವು ಕಾಗದಗಳು ಹೋಗಿಬಿಟ್ಟಿರುವದನ್ನು ನೋಡಿ, ಬಾದಶಹನ ಶಿಕ್ಷೆಯ ಭೀತಿಯಿಂದ ಶಿಕಂದರನು ಅತಿಶಯ ಕಳವಳವನ್ನು ಹೊಂದಿದನು.

ಶಿಕಂದರನಿಂದ ಸೋಹಾನಿಯ ಶೋಧಕ್ಕಾಗಿ ಕಳಿಸಲ್ಪಟ್ಟ ಸೈನಿಕರಲ್ಲಿ ಕೆಲವರು ಕೃತಕಾರ್ಯರಾಗದೆ ಒಡೆಯನ ಬಳಿಗೆ ಬಂದು ಈಸುದ್ದಿಯನ್ನು ತಿಳಿಸಿದರು. ಶಿಕಂದರನು ವಿಶ್ರಾಂತಿಗೃಹದ ಚಾಕರನನ್ನು ವಿಚಾರಿಸಲು, ಮನಸ್ಸು ಮಾಡಿದನು. ಅದರಂತೆ ಸೇಖಜಿಗೆ ಹೇಳಿದನು. ಸೇಖಜಿಯು ತನ್ನ ನೌಕರರನ್ನೆಲ್ಲ ಕರೆದುಕೊಂಡು ಬಂದು, ಶಿಕಂದರನ ಮುಂದೆನಿಲ್ಲಿಸಿದನು. ಆ ಚಾಕರರು ಶಿಕಂದರನನ್ನು ನೋಡಿ ಬೆಪ್ಪಾಗಿಹೋದರು. ಅವರೊಳ್ಳಬ್ಬನು ವಿಸ್ಮಯಾತಿರೇಕದಿಂದ— “ ಬೆಳಗಾಗುವದಕ್ಕೆ ಮೊದಲು ಇಲ್ಲಿಂದ ಪೋದವರು ಇವರೇ? ಅಲ್ಲ—ಅಲ್ಲ. ನಾನು ಮೋಸಹೋದೆನು. ಅವರು ಬೇರೆ, ಇವರು ಬೇರೆ ಇವರಿಬ್ಬರೂ ನೋಡುವದಕ್ಕೆ ಒಂದೇ ಮುಖಚರ್ಯೆಯುಳ್ಳವರಾಗಿದ್ದಾರೆ. ಇವರಿಬ್ಬರಲ್ಲಿಯ ಹೆಚ್ಚು ಕಡಿಮೆಯನ್ನು ತಿಳಿಯುವದು ಕಠಿಣವು, ” ಎಂದು ಅಂದನು.

ಶಿಕಂದರನು ಅವರನ್ನು ಶಾಂತಗೊಳಿಸುವದಕ್ಕಾಗಿ— “ ನನ್ನಿಂದ ನಿಮಗೆ ಯಾವತರದ ಹಾನಿಯೂ ಆಗಲಾರದು. ಹೆದರಬೇಡಿರಿ. ನಾವೆಲ್ಲರೂ ಒಬ್ಬ ಹೆಂಗಸಿನ ಮೋಸಕ್ಕೊಳಗಾಗಿದ್ದೇವೆ. ಸೋಹಾನಿಯೂ, ಅವನ ಹೆಂಡತಿಯೂ ಎಲ್ಲಿಗೆ ಹೋದರೆಂಬದನ್ನು ನೀವು ಹೇಳಬಲ್ಲಿರಾ? ” ಎಂದು

ಕೇಳಿದನು.

ಒಬ್ಬ ಚಾಕರನು ದೂರದಲ್ಲಿರುವದೊಂದು ಗುಡ್ಡವನ್ನು ತೋರಿಸಿ, ಸೋಹಾಸಿಯೂ, ಅವನ ಹೆಂಡತಿಯೂ ಆಕಡೆಗೆ ಹೋದರೆಂದು ಹೇಳಿದನು. ಸಿಕಂದರನು ಕಾಲವಿಲಂಬಮಾಡದೆ ಹೊರಡುವದಕ್ಕೆ ಸಿದ್ಧನಾದನು. ಸೇಖಜಿಯ ಬಾಕಿಯನ್ನು ತೀರಿಸಿ, ಅಂಗಡಿಯಿಂದ ಹೊರಬಿದ್ದನು. ಈ ಸಮಯದಲ್ಲಿ ಸೇಖಜಿಯು ಬಂದು,— "ಸಾಹೇಬ, ನಿಮ್ಮ ಸಂಗಡ ನಾನೂ ಬರುವೆನು," ಎಂದು ಹೇಳಿದನು.

"ಸೇಖಜಿ, ನೀನೇಕೆ ಬರುವೆ? ನಾನು ಅವರನ್ನು ಹುಡುಕಿಕೊಂಡು ಬರುವೆನು. ವ್ಯರ್ಥವಾಗಿ ನೀನು ಕಷ್ಟಕ್ಕೊಳಗಾಗಬೇಡ."

"ಒಬ್ಬ ಸುಂದರಿಯ ರೂಪಕ್ಕೋಸುಗ ತಾವು ಇಷ್ಟೊಂದು ತಿರಸ್ಕಾರವನ್ನೂ, ಮರ್ಮಯಾತನೆಯನ್ನೂ ಅನುಭವಿಸಲಿಕ್ಕೆ ಸಿದ್ಧರಾದಿರಿ. ನಾನು ಕೈಹಿಡಿದ ಹೆಂಡತಿಯ ಶೋಧಕ್ಕಾಗಿ, ತುಸು ಹಾದಿಯ ಶ್ರಮವನ್ನು ಸಹಿಸಲಾರೆನೆ? ಕುಲಸಮಳು ಗುಲಸಾನೆಯೊಡನೆ ಹೋಗಿರುವಳೆಂದು ನನ್ನ ಮನವರಿಕೆಯಾಗಿಹೋಗಿದೆ. ನೀವು ನನಗೆ ಬೇಡನ್ನಬೇಡಿರಿ. ನೀವು ಈ ಪ್ರದೇಶವನ್ನು ಚನ್ನಾಗಿ ಬಲ್ಲವರಲ್ಲ. ಈ ವಿಷಯದಲ್ಲಿ ನಾನು ನಿಮಗೆ ತುಂಬಾ ಸಹಾಯ ಮಾಡುವೆನು."

ಶಿಕಂದರನು ಸೇಖಜಿಯ ಮಾತಿಗೆ ಒಪ್ಪಿಕೊಂಡನು. ಎಲ್ಲರೂ ಗುಲಸಾನೆಯ ಶೋಧಕ್ಕೆ ಹೊರಟರು. ಗುಡ್ಡದಬಳಿಗೆ ಬಂದು ಅದನ್ನು ಹತ್ತಿ ನಡೆದರು. ತುಸುದೂರ ಹೋದಬಳಿಕ, ಶಿಕಂದರನು ಸೈನಿಕರನ್ನು ಬೇರೆ ಬೇರೆ ದಿಕ್ಕಿಗೆ ಕಳಿಸಿದನು. ತಾನು ಸೇಖಜಿಯೊಡನೆ ಬೇರೊಂದು ಕಡೆಗೆ ನಡೆದನು.

ಶಿಕಂದರನು ಸೇಖಜಿಯೊಡನೆ ಮಧ್ಯಾಹ್ನದವರೆಗೆ ನಡೆದನು. ಅವನಿಗೆ ಬಹಳ ದಣುವಾಯಿತು. ಅವರಿಬ್ಬರೂ ಒಂದು ಗಿಡದಬುಡದಲ್ಲಿ ವಿಶ್ರಮಿಸಿದರು. ಈ ಸಮಯದಲ್ಲಿ ಇವರಿಗೆ ರಮಣಿಯ ಅಳುವಸ್ವರವು ಕೇಳಬಂತಿತು. ಶಿಕಂದರನು ಆಶ್ಚರ್ಯಾನ್ವಿತನಾದನು. ಅವನು ಸೇಖಜಿಗೆ ನೋಡಿಕೊಂಡು ಬರುವದಕ್ಕೆ ಹೇಳಿದನು. ಕೂಡಲೆ ಧ್ವನಿಯನ್ನನು

ಸರಿಸಿ ನಡೆದನು.

ಸುಮಾರು ಅರ್ಧತಾಸಿನ ಮೇಲೆ ಓಡುತ್ತೋಡುತ್ತ ಬಂದು ಶಿಕಂದ ರನನ್ನು ಕುರಿತು— " ಸಾಹೇಬ, ಸೋಹಾನಿಯು ಸೋಹಾನಿಯು! " ಎಂದು ಅಂದನು.

ಶಿಕಂದರನು ವಿಸ್ಮಯದಿಂದಲೂ, ಆನಂದದಿಂದಲೂ— " ಎಲ್ಲಿರು ವನು ಎಂದನು.

ಸೋಹಾನಿಯು ಸಿಕ್ಕನು. ಅವನು ಇನ್ನು ಓಡಿಹೋಗುವ ಸಮ ಯವಿಲ್ಲ. ನನ್ನೊಡನೆ ಬರ್ರಿ ಎಂದು ಹೇಳಿ, ಸೇಖಜಿಯು ಶಿಕಂದರ ನನ್ನು ಕರೆದುಕೊಂಡು ಹೊರಟನು. ಅವರಿಬ್ಬರು ತುಸು ದೂರ ಹೋದ ಬಳಿಕ ನೋಡಿದರು. ಅಲ್ಲಿ–ಒಂದು ಗಿರಿಯ ನದಿಯ ತೀರದಲ್ಲಿ ಒಬ್ಬ ಮನು ಷ್ಯನು ಮಲಗಿಕೊಂಡಿದ್ದನು; ಬಳಿಯಲ್ಲಿ ಇಬ್ಬರು ಹೆಂಗಸರು ಕುಳಿತು ಕೊಂಡಿದ್ದರು. ಸೇಖಜಿಯು ಶಿಕಂದರನನ್ನು ಕುರಿತು— " ಖಾನಸಾ ಹೇಬ, ಇವರಾರೆಂಬದನ್ನು ನೀವು ಗುರುತಿಸುವದಿಲ್ಲವೇ? " ಎಂದು ಕೇಳಿದನು.

" ನದಿಯ ದಂಡೆಯಲ್ಲಿ ಒಬ್ಬನು ಮಲಗಿದ್ದಾನೆ, " ಎಂದು ಶಿಕಂದ ರನು ಹೇಳಿದನು.

" ಮತ್ತೆ? "

" ಅವನ ಬಳಿಯಲ್ಲಿ ಇಬ್ಬರು ಸ್ತ್ರೀಯರು ಕುಳಿತಿದ್ದಾರೆ ಅವರಲ್ಲೊ ಬ್ಬಳು ಅಳುತ್ತಿದ್ದಾಳೆ.

ನೀವು ಹೇಳಿದ್ದು ನಿಜವು ಮಲಗಿದವನು ಸೋಹಾನಿಯು. ಬಳಿಯಲ್ಲಿ ಗುಲಸಾನೆಯೂ, ಕುಲಸಮುಳೂ ಕುಳಿತಿದ್ದಾರೆ. ಈ ಗುಡ್ಡವನ್ನಿಳಿದು ಅವರ ಬಳಿಗೆ ಹೋಗೋಣ.

ಶಿಕಂದರನೂ, ಸೇಖಜಿಯೂ ಗುಡ್ಡವನ್ನು ಇಳಿದು ನದಿಯ ದಂಡೆಗೆ ಬಂದರು. ಅಲ್ಲಿ ಸೇಖಜಿಯು ಹೇಳಿದಂತೆ ಗುಲಸಾನೆಯೂ, ಕುಲ ಸಮುಳೂ ಇದ್ದರು; ಸೋಹಾನಿಯು ಉಸುಕಿನಭೂಮಿಯಲ್ಲಿ ಚೇತನಾ ವಿಹೀನನಾಗಿ ಬಿದ್ದುಕೊಂಡಿದ್ದನು. ಶಿಕಂದರನು ಗುಲಸಾನೆಯನ್ನು

ಕುರಿತು— “ ದುಷ್ಟೇ, ಇನ್ನೆಲ್ಲಿ” ಹೋಗುವೆ? ಈಸಾರೆ ನೀನು ನನ್ನ ಕೈಯೊಳಗಿಂದ ಪಾರಾಗಲಾರೆ! ” ಎಂದು ಅಂದನು.

ಗುಲಸಾನೆಯು ಉನ್ಮಾದಿನಿಯಂತೆ ಓಡುತ್ತ ಶಿಕಂದರನಬಳಿಗೆಬಂದು ಬಿಕ್ಕಿಬಿಕ್ಕಿ ಅಳುತ್ತ— “ ಶಿಖಂದರಖಾ, ನಾನು ಸರ್ವಸ್ವಿ ಹಾಳಾದೆನು! ನಾನು ನನ್ನ ಪತಿಯನ್ನು ನಿನ್ನ ಸೇಚಿನಿಂದ ಪಾರುಮಾಡಿದೆನು; ಅಕಬರನ ಸಿಟ್ಟಿನಿಂದ ಪಾರುಮಾಡಿದೆನು; ಆದರೆ ಜೀವದಿಂದ ಉಳಿಸಲಿಕ್ಕೆ ಸಮರ್ಥ ಳಾಗಲಿಲ್ಲ! ಅಯ್ಯೋ ಇನ್ನೇನು ಮಾಡಲಿ? ಇನ್ನು ನನ್ನ ಸ್ವಾಮಿಯು ಎಲ್ಲಿ? ” ಎಂದು ಗೋಳಿಟ್ಟಳು.

ಶಿಕಂದರನು ವಿಸ್ಮಯದಿಂದ— “ ಗುಲಸಾನಾ, ಏನಾಯಿತು? ” ಎಂದು ಕೇಳಿದನು.

“ ಅಲ್ಲಿ ನೋಡು! ವೀರಶ್ರೇಷ್ಠನಾದ ಸೋಹಾನಿಯು ಅಚೇತನ ನಾಗಿ ನೆಲದ ಮೇಲೆ ಬಿದ್ದಿದ್ದಾನೆ. ಈ ಗುಲಸಾನೆಯು ಹತಭಾಗ್ಯಳು! ಅವಳು ತನ್ನ ಗಂಡನನ್ನು ಕಳೆದುಕೊಂಡು ಬಿಟ್ಟು ವೈಧವ್ಯವನ್ನು ಹೊಂದಿದಳು.

“ ಗುಲಸಾನಾ, ದೇವರ ಸಂಕೇತವನ್ನು ಮೀರುವದು ಯಾರಿಂದಲೂ ಆಗದು! ಅದಕ್ಕಾಗಿ ಅತ್ತು ಉಪಯೋಗವಿಲ್ಲ. ಶಾಂತಳಾಗು, ಸೋಹಾನಿಯು ಹೇಗೆ ಸತ್ತನೆಂಬದನ್ನು ಹೇಳು. ”

ಅವಸರದಿಂದ ಗುಡ್ಡದಿಂದ ಇಳಿಯುವಾಗ್ಗೆ ಕಾಲುಜಾರಿತು. ಅದರಿಂದ ಪ್ರಾಣವು ಹೋಯಿತು.

ಗುಲಸಾನೆಯು ಶಿಕಂದರನ ದೃಷ್ಟಿಯಿಂದ ಘೋರ ಅಪರಾಧಿನಿಯು. ಶಿಕಂದರನು ಸೇಡುತೀರಿಸಿಕೊಳ್ಳುವದಕ್ಕಾಗಿ ಬಂದವನು; ಆದರೆ ಅವನು ಗುಲಸಾನೆಯ ಕಾತರಾವಸ್ಥೆಯನ್ನು ನೋಡಿ, ಸೇಡು ತೀರಿಸಿಕೊಳ್ಳುವ ದನ್ನು ಮರೆದು ಬಿಟ್ಟನು. ಅವನು ಕಳವಳಹೊಂದಿ—ಗುಲಸಾನಾ, ಆದ ದ್ದಾಗಿ ಹೋಯಿತು. ಅದನ್ನು ತಪ್ಪಿಸಲಿಕ್ಕೆ ಬರುವಂತಿಲ್ಲ. ಈಗ ನಾನು ನಿನಗೋಸುಗ ಏನು ಮಾಡಬೇಕೆಂಬದನ್ನು ಹೇಳು. ನಾನು ಅದನ್ನು ಮಾಡಲಿಕ್ಕೆ ಸಿದ್ಧನಿದ್ದೇನೆ. ಎಂದು ಹೇಳಿದನು.——

ಗುಲಸಾನೆಯು ಅಳುತ್ತ ಅಳುತ್ತ—ಶಿಕಂದರಖಾ, ನನ್ನನ್ನು ಪ್ರಾಪಂಚಿಕಳನ್ನಾಗಿಯೂ, ರಾಣಿಯನ್ನಾಗಿಯೂ ಮಾಡಿದ ಸೋಹಾನಿಯಅಸ್ತಿತ್ವವು ಇಂದು ಇಲ್ಲದಂತಾಯಿತು! ಇನ್ನು ಆ ಪ್ರೇಮವನ್ನೂ, ಸ್ನೇಹವನ್ನೂ, ಗೌರವವನ್ನೂ ನಾನು ಕಾಣುವಂತಿಲ್ಲ! ಒಂದು ಕಾಲದಲ್ಲಿ ಮಹಾರಾಣಿಯೆಂದು ಸಕಲರಿಂದ ಗೌರವವನ್ನು ಹೊಂದುತ್ತಿದ್ದ ನಾನು ದುರ್ದೈವಕ್ಕೋಸ್ಕರ ಉನ್ಮಾದಿನಿಯಿಂದ ಅತ್ತಿತ್ತ ಅಲೆಯಬೇಕಾಯಿತು! ಮುಂದೆ ನನ್ನ ಅವಸ್ಥೆಯು ಏನೇ ಆಗಲಿ. ಸದ್ಯಕ್ಕೆ ನೀನು ನನ್ನ ಸ್ವಾಮಿಯ ಈಪವಿತ್ರ ದೇಹವು ಕಾಡುಪ್ರಾಣಿಗಳಿಗೆ ಆಹಾರವಾಗದಂತೆ, ಸದ್ಗತಿಯನ್ನು ಹೊಂದುವಂತೆ ವ್ಯವಸ್ಥೆ ಮಾಡಿಸಬೇಕು, ಎಂದು ಹೇಳಿದಳು.

ಗುಲಸಾನೆಯ ಈ ಅವಸ್ಥೆಯನ್ನು ನೋಡಿ, ಶಿಕಂದರನ ಕಣ್ಣುಗಳಲ್ಲಿ ನೀರು ಬಂದವು. ಅವನು ಮೃದುಸ್ವರದಿಂದ—"ಗುಲಸಾನಾ, ನಾನು ನೀನು ಹೇಳಿದಂತೆ ಮಾಡುವೆನು. ಇದಲ್ಲದೆ ಮತ್ತೇನನ್ನಾದರೂ ಮಾಡಬೇಕಾಗಿದ್ದರೆ, ಹೇಳು. ಈ ಸಮಯದಲ್ಲಿ ನಾನು ನಿನಗೋಸುಗ ಏನನ್ನಾದರೂ ಮಾಡಬಲ್ಲೆನು," ಎಂದು ಅಂದನು.

ಗುಲಸಾನೆಯು ಕೆಲಹೊತ್ತು ವಿಚಾರಮಾಡಿದಳು. ತರುವಾಯ ಅವಳು—ಅಕಬರಶಹನು ಸೋಹಾನಿಯನ್ನು ಹಿಡಿದುಕೊಂಡುಬರುವಂತೆ ನಿನಗೆ ಅಪ್ಪಣೆಮಾಡಿದ್ದಾನೆ. ಒಂದು ವೇಳೆ ಅವನು ಜೀವದಿಂದಿರುವವರೆಗೆ ಕೈವಶನಾಗದಿದ್ದರೆ, ಅವನಹೆಣವನ್ನಾದರೂ ತರಬೇಕೆಂದು ನಿನಗೆ ಅಪ್ಪಣೆಯಾಗಿರುವದು. ಅದರಂತೆ ನೀನು ಈ ಶವವನ್ನು ಆಗ್ರಾಕ್ಕೆ ಒಯ್ದು, ಬಾದಶಹನ ಆಜ್ಞಾಪಾಲನೆಮಾಡು, ಎಂದು ಹೇಳಿದಳು.

ಶಿಕಂದರನು ಸುಮ್ಮನೆ ನಿಂತದ್ದನ್ನು ನೋಡಿ, ಗುಲಸಾನೆಯು ಕಣ್ಣೀರುಗಳನ್ನೊರಿಸಿಕೊಂಡು—ಶಿಕಂದಖಾ, ಈ ಶವವನ್ನು ಬಾದಶಹನ ಬಳಿಗೆ ಒಯ್ಯಲಿಕ್ಕೆ ಅನುಮಾನಿಸುತ್ತಿರುವೆಯೇನು? ಅವನು ಈ ಶವದ ಅಪಮಾನಮಾಡಬಹುದೆಂದು ನೀನು ಭಾವಿಸುತ್ತಿರುವೆಯೇನು? ಅಕಬರನು ಅಷ್ಟೊಂದು ನೀಚನಲ್ಲ! ಅವನು ವೀರನ ಈ ಪವಿತ್ರದೇಹದ ಅಪಮಾನವನ್ನೆಂದಿಗೂ ಮಾಡನು! ಅವನು ಈ ದೇಹವನ್ನು ಉತ್ತಮವಾದ

ಸ್ಥಳದಲ್ಲಿ ಸಮಾಧಿಸ್ಥವಾಗುವಂತೆ ಅಪ್ಪಣೆ ಮಾಡುವನು. ನನ್ನ ಸ್ವಾಮಿಯು ಸಾಮಾನ್ಯನಲ್ಲ. ಪರಾಕ್ರಮಶಾಲಿಯು. ಅರಸೊತ್ತಿಗೆಯನ್ನನುಭವಿಸಿದ್ದವನು. ಇದಕ್ಕನುಗುಣವಾಗಿಯೇ ಅವನ ಉತ್ತರಕ್ರಿಯೆಯು ಸಾಗಲಿಕ್ಕೆ ಬೇಕೆಂದು ನನ್ನ ಕಡೆಯ ಇಚ್ಛೆಯುಂಟು. ನಾನು ನಿನ್ನೊಡನೆ ಆಚರಿಸಿದ ವಂಚನೆಯ ವ್ಯವಹಾರವನ್ನು ಮರೆದುಬಿಡು. ಈ ಕಠಿಣಪ್ರಸಂಗದಲ್ಲಿ ನನಗೆ ಸಹಾಯಮಾಡು. ಸ್ವಾಮಿಯು ಜೀವದೊಡನೆ ನನ್ನ ಸಕಲ ಆಶೆಗಳು ನಷ್ಟವಾದವು. ಇನ್ನು ನಾನು ಕೇವಲ ಪತಿಯ ಸಮಾಧಿಯ ಸೇವೆಯಮಾಡಿಕೊಂಡಿದ್ದು ಕಾಲಕಳೆಯುವೆನು. ಇದಕ್ಕೆ ನೀನು ನನಗೆ ಅನುಕೂಲತೆ ಮಾಡಿಕೊಡು, ಎಂದು ಹೇಳಿದಳು.

ಗುಲಸಾನಾ, ನಾನು ಮಹಾಪಾಪಿಷ್ಠನು. ನಾನೇ ನಿನ್ನ ಈ ಅಕಾಲ ವೈಧವ್ಯಕ್ಕೆ ಮೂಲಕಾರಣನು. ಇದಕ್ಕಾಗಿ ನನಗೆ ಪ್ರಾಯಶ್ಚಿತ್ತವು ಅವಶ್ಯವಾಗಿಬೇಕು. ಈ ಪ್ರಾಯಶ್ಚಿತ್ತರೂಪವಾಗಿ ನಾನು ಉತ್ತಮವಾದ ಸಮಾಧಿಮಂದಿರವನ್ನು ಕಟ್ಟಿಸಿಕೊಡುವೆನು. ನೀನು ಚಿಂತಿಸಬೇಡ.

ಅರಣ್ಯದಲ್ಲಿ ಕಾಲವಿಲಂಬ ಮಾಡುತ್ತ ಕುಳಿತುಕೊಳ್ಳುವದು ಯೋಗ್ಯವಲ್ಲೆಂದು ತಿಳಿದು, ಶಿಕಂದರನು ಮುಂದಿನ ಉದ್ಯೋಗಕ್ಕೆ ತೊಡಗಿದನು. ಈ ಸಮಯದಲ್ಲಿ ಕೆಲವು ಸೈನಿಕರು ಅಲ್ಲಿಗೆ ಬಂದರು. ಶಿಕಂದರನು ಸೇಖಜಿಯನ್ನು ಈದಲಗಡಕ್ಕೆ ಕಳಿಸಿದನು. ಅವನು ಸುಗಂಧದ್ರವ್ಯ ಮೊದಲಾದ ವಸ್ತುಗಳನ್ನು ತೆಗೆದುಕೊಂಡುಬಂದನು. ಶಿಕಂದರನು ಶವಕ್ಕೆ ಸುಗಂಧದ್ರವ್ಯದ ಲೇಪನಮಾಡಿ, ಅದನ್ನು ಗಾಡಿಯಲ್ಲಿ ಹಾಕಿಸಿದನು. ಎಲ್ಲರೂ ಆಗ್ರಾದ ಹಾದಿಯನ್ನು ಹಿಡಿದು ನಡೆದರು.

## ಎಂಟನೆಯ ಪರಿಚ್ಛೇದ.

ಬಾದಶಹನು ದಿವಾಣ—ಈ—ಖಾಸದ ಒಂದು ಕೋಣೆಯಲ್ಲಿ ರಾಮದಾಸನೆಂಬ ಪಂಡಿತನೊಡನೆ ಹಿಂದೂಧರ್ಮವನ್ನು ಚರ್ಚಿಸುತ್ತಲಿದ್ದನು. ಬಳಿಯಲ್ಲಿ ಬೀರಬಲ್ಲನು ಕುಳಿತುಕೊಂಡಿದ್ದನು. ವಾದವು ತೀರಭರಕ್ಕೆ

ಬಂದಿತ್ತು. ಬಾದಶಹನ ಬಳಿಯಲ್ಲಿ ಇಬ್ಬರು ದಾಸಿಯರು ನಿಂತುಕೊಂಡು ಗಾಳಿಯನ್ನು ಬೀಸುತಲಿದ್ದರು.

ಶಿಕಂದರನು ಬಾದಶಹನ ಬಳಿಗೆ ಬಂದು ಕುರ್ನೀಸಮಾಡಿ—ಶಹಾನಶಹ, ದೇವರು ನಿಮ್ಮನ್ನು ಚಿರಜೀವಿಗಳನ್ನಾಗಿ ಮಾಡಲಿ; ಸದಾ ಸೌಭಾಗ್ಯವಂತರಾಗಿರುವಂತೆ ಅನುಗ್ರಹಿಸಲಿ, ಎಂದು ಅಂದನು.

ಬಾದಶಹನು ವಾದವನ್ನು ನಿಲ್ಲಿಸಿ, ಶಿಕಂದರನ ಕಡೆಗೆ ನೋಡಿದನು. ಅವನ ಮುಖವು ಕೆಂಪಿಟ್ಟಿತು. ಇದನ್ನು ನೋಡಿ, ಶಿಕಂದರನು ಬಾದಶಹನು ತನ್ನ ಮೇಲೆ ಕ್ರೋಧಾಯಮಾನನಾಗಿರುವನೆಂದು ತಿಳಿದನು. ಭಾವೀಶಿಕ್ಷೆಯ ಹೆದರಿಕೆಯಿಂದ ಕಳವಳ ಹೊಂದಿದನು. ಅವನು ಕೆಳಗೆ ಮೋರೆಮಾಡಿಕೊಂಡು ನಿಂತನು. ಬಾದಶಹನು ತಿರಸ್ಕಾರದಿಂದ —ಏನು, ಸೇನಾಪತಿಗಳೇ, ತಾವು ಬಂದಿರಾ? ತಮ್ಮ ಪರಾಕ್ರಮವನ್ನು ಕೇಳಿ ತುಂಬಾ ಆನಂದವಾಯಿತು! ತಮ್ಮಂಥ ಸೇನಾಪತಿಗಳು ಇನ್ನು ನಾಲ್ಕೆಂಟು ಮಂದಿ ಸಿಕ್ಕರೆ, ನನ್ನ ಸೌಭಾಗ್ಯಕ್ಕೆ ಕೊರತೆಯೆಲ್ಲಿ? ಎಂದು ಅಂದನು.

ಶಿಕಂದರನು ಏನೆಂದು ಉತ್ತರಕೊಡುವನು? ಅವನು ತನ್ನಲ್ಲಿಯೇ ಅಂದುಕೊಂಡು—ಬಾದಶಹನಿಗೆ ಇಷ್ಟರಲ್ಲಿಯೇ ಸೋಹಾನಿಯ ಸಂಬಂಧದ ಯಾವತ್ತು ಸಂಗತಿಯು ತಿಳಿದದ್ದು ಹೇಗೆ? ಯಾರು ಹೇಳಿದ್ದಾರಾದೀತು? ಇನ್ನು ನನ್ನ ಅವಸ್ಥೆಯು ನೆಟ್ಟಗಾಗುವಂತಿಲ್ಲ!

ಬಾದಶಹನು ಗಂಭೀರತೆಯಿಂದ—ಶಿಕಂದರಖಾ, ನೀನು ದೊಡ್ಡ ಅಪರಾಧಿಯು. ರಾಜನೀತಿಯನ್ನು ಮರೆದು, ಧರ್ಮಕ್ಕೆ ಜಲಾಂಜಲಿಯನ್ನು ಕೊಟ್ಟು ಅನುಚಿತ ಕೆಲಸವನ್ನು ಮಾಡಿರುವೆ! ಈ ನಿನ್ನ ಅಪರಾಧವನ್ನು ನಾನು ಕ್ಷಮಿಸಲಾರೆನು! ನೀನು ಬುದ್ಧಿವಂತಿಕೆಯಿಂದ ಕೆಲಸ ಮಾಡಿದ್ದರೆ, ನನಗೆ ಸೋಹಾನಿಯ ಭೆಟ್ಟಿಯಾಗುತ್ತಿತ್ತು—ಅವನು ನಮ್ರತೆಯಿಂದ ತನ್ನ ತಪ್ಪನ್ನು ಒಪ್ಪಿಕೊಂಡು ಕೃಪಾಭಿಕ್ಷೆಯನ್ನು ಬೇಡುತಲಿದ್ದನು. ನೀನು ಹೀಗೆ ಮಾಡಿದ್ದೆಯಾದರೆ, ನಾನು ನಿನ್ನ ಮೇಲೆ ತುಂಬಾ ಸಂತುಷ್ಟನಾಗುತ್ತಿದ್ದೆನು. ನಿನ್ನನ್ನು ಒಂದು ಪ್ರಾಂತದ ಸುಭೇದಾರನನ್ನಾಗಿ ಮಾಡುತ್ತಿದ್ದೆನು. ಆದರೆ—ಎಂದು ಅಂದು ಸುಮ್ಮನಾದನು.

ಶಿಕಂದರನು ಬಾದಶಹನ ಈ "ಆದರೆ" ಎಂಬ ಶಬ್ದದ ಅರ್ಥವನ್ನು ಕೂಡಲೆ ಗ್ರಹಿಸಿದನು. ತನ್ನ ಧೈರ್ಯವನ್ನು ಹಳಿದುಕೊಂಡನು. ಬಾದಶಹನ ಶಿಕ್ಷೆಯ ಕಠೋರತೆಯನ್ನು ನೆನೆದು ತುಂಬಾ ವ್ಯಥೆಪಟ್ಟನು. ಬಾದಶಹನು ಶಿಕಂದರನನ್ನು ಕುರಿತು—ಸೋಹಾನಿಯ ಶವವು ಎಲ್ಲಿರುವದು? ಎಂದು ಕೇಳಿದನು.

ಶವವನ್ನು ಆಗ್ರಾಕ್ಕೆ ತಂದಿದ್ದೇನೆ. ಅದರ ಮುಂದಿನ ವ್ಯವಸ್ಥೆಯ ಬಗ್ಗೆ ಅಪ್ಪಣೆ ಮಾಡೋಣವಾಗಲಿ, ಎಂದು ಶಿಕಂದರನು ಭಯಗ್ರಸ್ತನಾಗಿ ವಿನಂತಿ ಮಾಡಿಕೊಂಡನು.

ಬಾದಶಹನು ಖೋಜಾನನ್ನು ಕರೆದು, ಮೀರಮುನ್ಶಿಯನ್ನು ಕರೆತರುವಂತೆ ಅಪ್ಪಣೆಮಾಡಿದನು. ಖೋಜಾನು ಹೊರಟುಹೋದನು. ಶಿಕಂದರನು ಬಾದಶಹನ ಮುಖದ ಕಡೆಗೆ ನೋಡಿದನು. ಅವನ ಸಿಟ್ಟು ಇನ್ನೂ ಇಳಿದಿರಲಿಲ್ಲ. ಶಿಕಂದರನು ಕೆಲಹೊತ್ತು ಯೋಚಿಸಿ, ಮೊಣಕಾಲೂರಿ ಕುಳಿತು—ದೀನದುನಿಯಾರಮಾಲೀಕ, ನಾನು ಅಪರಾಧಿಯಾಗಿರುವದು ನಿಜವು. ಈಸಾರೆ ತಾವು ನನ್ನ ತಪ್ಪನ್ನು ಕ್ಷಮಿಸಬೇಕು. ಈ ಸೇವಕನು ಇನ್ನು ಮುಂದೆ ಇಂಥ ಅನುಚಿತಕಾರ್ಯವನ್ನೆಂದಿಗೂ ಮಾಡನು! ಎಂದು ಬೇಡಿಕೊಂಡನು.

ಬಾದಶಹನು ಕರ್ಕಶಸ್ವರದಿಂದ— "ನಾನು ಈ ರಾಜ್ಯದ ಅರಸನು ನ್ಯಾಯಾನ್ಯಾಯಗಳನ್ನು ವಿಚಾರಿಸುವದೂ, ಸತ್ಕೃತ್ಯಕ್ಕೆ ಬಹುಮಾನಮಾನವನ್ನು ಕೊಡುವದೂ, ದುಷ್ಕೃತ್ಯಕ್ಕೆ ಶಿಕ್ಷೆಯನ್ನು ವಿಧಿಸುವದೂ, ನನ್ನ ಈ ಕರ್ತವ್ಯವು. ನಾನು ನನ್ನ ಈ ಕರ್ತವ್ಯದಿಂದ ಎಂದೂ ವಂಚಿತನಾಗಲಾರೆನು; ನಿನ್ನಂಥ ಅಪರಾಧಿಯನ್ನು ಕ್ಷಮಿಸಲಾರೆನು. ನೀನು ನಿನ್ನ ಈ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಹೊಂದುವೆ" ಎಂದು ಅಂದನು.

ಈ ಸಮಯದಲ್ಲಿ ಮೀರಮುನ್ಶಿಯು ಅಲ್ಲಿಗೆ ಬಂದು ಕುರ್ನಿಸ ಮಾಡಿ ನಿಂತುಕೊಂಡನು. ಬಾದಶಹನು ಅವನನ್ನು ಕುರಿತು—ಬಂಡುಗಾರನಾದ ಸೋಹಾನಿಯ ಪವಿತ್ರದೇಹವನ್ನು ಇಂದು ಸಮಾಧಿಸ್ತವಾಗಿ

ಮಾಡಬೇಕಾಗಿದೆ. ನಮ್ಮ ಅಮೀರ–ಉಮರಾವರ ಸಮಾಧಿ ಭೂಮಿಯ ಯಲ್ಲಿಯೇ ಸೋಹಾನಿಯ ಗೋರಿಯಾಗಬೇಕಾಗಿದೆ. ಇದಕ್ಕಾಗಿ ನಾನು ಎರಡು ಸಾವಿರ ಅಸರಫಿಗಳನ್ನು ಮಂಜೂರ ಮಾಡಿದ್ದೇನೆ. ನೀನು ಈ ಹಣವನ್ನು ತೆಗೆದುಕೊಂಡು ಹೋಗಿ ಯಾವತ್ತು ವ್ಯವಸ್ಥೆಯನ್ನು ಮಾಡು. ಈ ದುಷ್ಟ ಶಿಕಂದರಖಾನನನ್ನು ಕರೆದುಕೊಂಡು ಹೋಗು. ಇವನು ನಿನ್ನ ಕೆಲಸದಲ್ಲಿ ಸಹಾಯ ಮಾಡುವನು. ನಾನು ಸಾಯಂಕಾಲ ದಲ್ಲಿ ಸಮಾಧಿಯ ಸ್ಥಳಕ್ಕೆ ಬರುವೆನು, ಎಂದು ಅಪ್ಪಣೆಮಾಡಿದನು.

ಬಾದಶಹನು ಪುನಃ ಪಂಡಿತನೊಡನೆ ಚರ್ಚೆಯನ್ನು ನಡಿಸಿದನು. ಶಿಕಂದರನೂ, ಮೀರಮುನ್ಸಿಯೂ ಆ ಸ್ಥಳದಿಂದ ಹೊರಬಿದ್ದರು. ಶಿಕಂದ ರನು ಮೀರಮುನ್ಸಿಗೆ ಅವಶ್ಯವಿದ್ದ ಸಹಾಯವನ್ನು ಮಾಡಿ, ವ್ಯಥಿತಾಂತಃ ಕರಣದಿಂದ ಮನೆಗೆ ಬಂದನು. ನಿಟ್ಟುಸುರುಬಿಟ್ಟು, ಆರಾಮಕುರ್ಚಿಯ ಮೇಲೆ ಬಿದ್ದುಕೊಂಡು, ವಿಚಾರಿಸತೊಡಗಿದನು— "ನಾನು ಈದಲಗಡ ವನ್ನು ಕೈವಶಮಾಡಿಕೊಂಡು ಬಂದೆನು. ಇದಕ್ಕಾಗಿ ನನಗೆ ಬಹುಮಾನವು ದೊರೆಯಬೇಕಾಗಿತ್ತು. ಬಹುಮಾನವು ಒತ್ತಟ್ಟಿಗಿರಲಿ, ಘೋರಶಿಕ್ಷೆಗೆ ಗುರಿಯಾಗುವ ಪ್ರಸಂಗಬಂದಿದೆ. ಇದೆಲ್ಲಕ್ಕೂ ಗುಲಸಾನೆಯೇ ಕಾರ ಣಳು. ನಾನು ಇನ್ನು ಅವಳ ಮೋರೆಯನ್ನು ನೋಡತಕ್ಕದ್ದಲ್ಲ!"

ಗುಲಸಾನೆಯೂ, ಕುಲಸಮಳೂ, ಸೇಖಜಿಯೂ ಶಿಕಂದರನ ಮನೆ ಯಲ್ಲಿಯೇ ಇಳಿದುಕೊಂಡಿದ್ದರು. ಕುಲಸಮಳು ಗುಲಸಾನೆಯ ಪರಿಚ ಯದ ಕೆಲಸವನ್ನು ಕೈಕೊಂಡಿದ್ದಳು. ಇದಲ್ಲದೆ ಶಿಕಂದರನು ಗುಲಸಾ ನೆಯ ಸೇವೆಗಾಗಿ ಇಬ್ಬರು ದಾಸಿಯರನ್ನು ನಿಯಮಿಸಿದ್ದನು.

ಶಿಕಂದರನು, ತನ್ನ ಭವಿಷತ್ತಿನ ವಿಚಾರದಲ್ಲಿ ಮಗ್ನನಾಗಿರುವಾಗ ಕುಲಸಮಳು, ಅವನ ಬಳಿಗೆ ಬಂದಳು. ಶಿಕಂದರನು ಅವಳನ್ನು ನೋಡಿ— "ಸುದ್ದಿಯೇನು? ನಿನ್ನ ಒಡೆಯಳ ಸ್ನಾನಾಹಾರಾದಿ ಕೆಲಸ ಗಳು ತೀರಿದವೇ?" ಎಂದು ಕೇಳಿದನು.

ಕುಲಸಮಳು ವಿಷಾದದಿಂದ—ಗುಲಸಾನೆಯು ಸ್ನಾನವನ್ನು ಮಾಡಿದ್ದಾಳೆ; ಆದರೆ ಆಹಾರವನ್ನೇನೂ ತೆಗೆದುಕೊಂಡಿಲ್ಲ. ನಾನು ಎಷ್ಟು

ಹೇಳಿದರೂ ಕೇಳಲೊಲ್ಲಳು. ಅವಳು ನಿನ್ನನ್ನು ಕರೆದುಕೊಂಡು ಬರುವಂತೆ ಹೇಳಿದ್ದಾಳೆ ಎಂದು ಹೇಳಿದಳು.

ಗುಲಸಾನೆಯು ಮೂರು-ನಾಲ್ಕು ದಿವಸಗಳಿಂದ ಊಟಮಾಡಿರಲಿಲ್ಲ. ಇಂದು ಅವಳು ಆಹಾರತೆಗೆದುಕೊಳ್ಳುವದು ಅವಶ್ಯವಾಗಿತ್ತು. ಅದಕ್ಕಾಗಿ ಶಿಕಂದರನು ಯಾವದೇ ರೀತಿಯಿಂದಾಗಲಿ ಅವಳು ಊಟಮಾಡುವಂತೆ ಯೋಚಿಸಿ, ಅವಳ ಬಳಿಗೆ ಹೋದನು.

ಬಿಳೇ ಸಂಗಮುರವರೀಕಲ್ಲಿನ ನೆಲದಮೇಲೆ ಅಪ್ಸರೋಪಮಳಾದ ಗುಲಸಾನೆಯು ಬಿದ್ದುಕೊಂಡಿದ್ದಳು. ಅವಳನ್ನು ನೋಡಲಾಗಿ, ಸರೋವರದಲ್ಲಿ ಅರ್ಧಅರಳಿದ ಬಿಳೇ ಕಮಲವು ತೇಲುತ್ತಿರುವದೋ ಏನೋ ಎಂದು ಭಾಸವಾಗುತ್ತಿತ್ತು. ಅವಳ ಅಸ್ತವ್ಯಸ್ತವಾದ ಕೂದಲುಗಳು, ಮುಖದ ಮೇಲೂ, ಬೆನ್ನಮೇಲೂ ಬಿದ್ದು, ಒಂದು ತರದ ಶೋಭೆಯನ್ನುಂಟುಮಾಡಿದ್ದವು. ಈ ದೃಶ್ಯವನ್ನು ನೋಡಿ, ಚಿರಚಂಚಲವಾದ ವಿದ್ಯುಲ್ಲತೆಯು ಸ್ಥಿರವಾಗಿ ಭೂಮಿಯಲ್ಲಿ ಆಶ್ರಯ ಹೊಂದಿದೆಯೋ ಏನೋ ಎಂದು ಸಂದೇಹವುಂಟಾಗುತ್ತಿತ್ತು.

ಶಿಕಂದರನು ಸ್ನೇಹಪೂರ್ಣಸ್ವರದಿಂದ—"ಗುಲಸಾನಾ, ಏಳು, ಊಟಮಾಡು. ಹಟಹಿಡಿದು ಆಹಾರಬಿಟ್ಟು ಕುಳಿತುಕೊಳ್ಳುವದು ನೆಟ್ಟಗಲ್ಲ," ಎಂದು ಹೇಳಿದನು.

ಗುಲಸಾನೆಯು ತನ್ನ ಎಡಗೈ ಮೇಲೆ ಭಾರಹಾಕಿ ಎದ್ದು ಕುಳಿತುಕೊಂಡಳು. ಅಶ್ರುಪೂರ್ಣವಾದ ಕಣ್ಣುಗಳನ್ನು ಸೆರಗಿನಿಂದ ಒರಿಸಿಕೊಂಡಳು. ಅಸ್ತವ್ಯಸ್ತವಾಗಿ ಬಿದ್ದಿದ್ದ, ಕೂದಲುಗಳನ್ನು ಸರಿಮಾಡಿಕೊಂಡಳು. ತರುವಾಯ ಅವಳು—"ಶಿಕಂದರಖಾ, ನನ್ನ ಕಣ್ಣುಗಳಲ್ಲಿ ನೀರುಬರುವಂತೆ ಮಾಡಿದವರಾರು? ದೂರದಲ್ಲಿರುವ ಮಾಳವದಲ್ಲಿ, ವನಶೋಭೆಯಿಂದೊಡಗೊಂಡ ಸುಂದರ ಪ್ರದೇಶದಲ್ಲಿ ಸಂಸಾರವನ್ನು ಹೂಡಿಕೊಂಡು, ಸುಖದಿಂದ ಕಾಲಕಳೆಯುತ್ತಿದ್ದೆನು! ನನ್ನ ಈ ಸುಖವನ್ನು ನೋಡಿ, ನಿನ್ನಿಂದ ಸಹಿಸುವದಕ್ಕಾಗಲಿಲ್ಲವೇನು? ಸೋಹಾನಿಯು ಈದಲಗಡದಲ್ಲಿ ಮರಣಹೊಂದಿದ್ದರೆ, ಅವನ ಸ್ಮಶಾನಯಾತ್ರೆಗೆ

ಅಸಂಖ್ಯಜನರು ನೆರೆಯುತ್ತಿದ್ದರು. ಸಾವಿರಾರು ಜನರು ಅವನ ಮರಣಕ್ಕಾಗಿ ಕಣ್ಣೀರುದುರಿಸುತ್ತಿದ್ದರು. ಸಡಗರದಿಂದ ಅವನ ಸ್ಮಶಾನ ಯಾತ್ರೆಯನ್ನು ನೆರವೇರಿಸುತ್ತಿದ್ದರು. ಆದರೆ ಇಲ್ಲಿ ಅವನಿಗಾಗಿ ಅಳುವವರು ನನ್ನಹೊರತು ಮತ್ತೆಯಾರೂ ಇಲ್ಲ. ಅವನ ಉತ್ತರ ಕ್ರಿಯೆಯನ್ನು ಸಾಗಿಸುವವರಿಲ್ಲ. ಇದನ್ನು ನೋಡಿ, ನಾನು ಹೇಗೆ ಸಹಿಸಲಿ? ನಾನು ಇದರ ಸೇಡು ತೀರಿಸಿಕೊಂಡ ಹೊರತು ಸಮಾಧಾನ ಹೊಂದುವಂತಿಲ್ಲ! ಆ ವರೆಗೆ ನಾನು ಊಟ ಮಾಡುವಂತಿಲ್ಲ! ಎಂದು ಹೇಳಿದಳು.

ಶಿಕಂದರನು ಗುಲಸಾನೆಯ ಈ ತಿರಸ್ಕಾರವನ್ನು ಸುಮ್ಮನೆ ಸಹಿಸಿಕೊಂಡು, ಅಲ್ಲಿಂದ ಹೊರಟನು. ಗುಲಸಾನೆಯು ಅವನನ್ನು ಕರೆದು—ನನ್ನಪತಿಯ ದೇಹವು ಎಲ್ಲಿ ಅದೆ? ಅದರ ಸ್ಮಶಾನಯಾತ್ರೆಯ ವ್ಯವಸ್ಥೆ ಏನಾಯಿತು? ಎಂದು ಕೇಳಿದಳು.

ಮೀರಮುನ್ಷಿಯು ಇದರ ಯಾವತ್ತು ವ್ಯವಸ್ಥೆಯನ್ನು ಮಾಡಿದ್ದಾನೆ. ಬಾದಶಹನು ಇದಕ್ಕಾಗಿ ಎರಡುಸಾವಿರ ಅಸರಫಿಗಳನ್ನು ಕೊಟ್ಟಿದ್ದಾನೆ.

ಗುಲಸಾನೆಯು ಎದ್ದು ನಿಂತುಕೊಂಡು—ಬಾದಶಹನ ದಾನವು ನನಗೆ ಬೇಕಾಗಿಲ್ಲ! ದುರ್ಗಾಧಿಪತಿಯ ಉತ್ತರ ಕ್ರಿಯೆಯು ಪರರ ಹಣದಿಂದ ಸಾಗುತ್ತಿರುವದನ್ನು ನೋಡಿ, ಜೀವದಿಂದಿರುವ ನಾನು ಸಹಿಸಲಾರೆನು. ಮೂರು ದಿವಸಗಳ ಹಿಂದೆ ನಾನು ರಾಣಿಯಾಗಿದ್ದೆನು. ಅದೇ ನಾನು ಇಂದು ಆಶ್ರಯಹೀನಳಾಗಿರುವೆನು. ಆದರೂ ವೈರಿಯ ಸಹಾಯವನ್ನು ಹೊಂದುವ ಇಚ್ಛೆಯು ನನಗಿಲ್ಲ. ನನ್ನ ಪತಿಯು ನನ್ನನ್ನು ಅನಾಥಳನ್ನಾಗಿ ಮಾಡಿ ಹೋಗಿದ್ದರೂ, ಅರ್ಥಹೀನಳನ್ನಾಗಿ ಮಾಡಿಲ್ಲ! ನೀನು ಇಲ್ಲಿಯೇ ಕುಳಿತುಕೊಳ್ಳು. ನಾನು ಈಗ ಬರುವೆನು, ಎಂದು ಹೇಳಿ ಸಮೀಪದಲ್ಲಿರುವ ಬೇರೊಂದು ಕೋಣೆಗೆ ಹೋದಳು.

ತುಸು ಹೊತ್ತಿನ ಮೇಲೆ ಗುಲಸಾನೆಯು ಕೈಯಲ್ಲಿ ಹಸ್ತ

ದಂತನಿರ್ಮಿತವಾದ ಸಣ್ಣ ಪೆಟ್ಟಿಗೆಯನ್ನು ಹಿಡಿದುಕೊಂಡು ಮತ್ತೆ ಅಲ್ಲಿಗೆ ಬಂದಳು. ಕೈಯಲ್ಲಿರುವ ಪೆಟ್ಟಿಗೆಯನ್ನು ಶಿಕಂದರನ ಕೈಯಲ್ಲಿ ಕೊಟ್ಟು, ಅದನ್ನು ತೆಗೆದುನೋಡುವಂತೆ ಹೇಳಿದಳು. ಶಿಕಂದರನು ಅದನ್ನು ತೆಗೆದು ನೋಡಿದನು. ಅದು ಬಹು ಅಮೂಲ್ಯವಾದ ಅನೇಕ ಆಭರಣಗಳಿಂದ ತುಂಬಿತ್ತು. ಅದರಲ್ಲಿರುವ ಉಜ್ವಲವಾದ ರತ್ನಗಳ ಪ್ರಭೆಯಿಂದ ಶಿಕಂದರನ ಕಣ್ಣು ಕುಕ್ಕಿದವು. ಗುಲಸಾನೆಯು ಶಿಕಂದರನನ್ನು ಕುರಿತು—ಈ ಪೆಟ್ಟಿಗೆಯನ್ನು ಬಾದಶಹನಿಗೆ ಕೊಡು. ಇದರಲ್ಲಿರುವ ಅಲಂಕಾರಗಳನ್ನು ಮಾರಿ, ಬಂದ ಹಣದಿಂದ ಸೋಹಾನಿಯ ಉತ್ತರಕ್ರಿಯೆಯನ್ನು ಸಾಗಿಸುವಂತೆ ವಿನಂತಿ ಮಾಡಿಕೊಳ್ಳು. ಬಾದಶಹನು ಉದಾರಹೃದಯನು. ಅವನು ಶತ್ರುವಿನ ಸ್ಮಶಾನಯಾತ್ರೆಗಾಗಿ ಎರಡುಸಾವಿರ ಅಸರಫಿಗಳನ್ನು ಕೊಟ್ಟದ್ದು ಸ್ತುತ್ಯಸಂಗತಿಯು. ಇದಕ್ಕಾಗಿ ನಾನು ಆಭಾರಿಯಾಗಿದ್ದೇನೆ; ಆದರೆ ಅವನ ಆ ದಾನವನ್ನು ಸ್ವೀಕರಿಸಲಾರೆನು. ಪರಕೀಯರ ಹಣದಿಂದ ಸಮಾಧಿಸ್ಥನಾದ ಮನುಷ್ಯನಿಗೆ ಸದ್ಗತಿಯಾಗುವದಿಲ್ಲವೆಂದು ನಾನು ಕೇಳಿದ್ದೇನೆ. ಸ್ವತಃ ನನ್ನ ಪತಿಯು ಇದನ್ನು ಭಾವಿಸಿಯೇ ಈ ಪೆಟ್ಟಿಗೆಯನ್ನು ನನ್ನ ಕೈಯಲ್ಲಿ ಕೊಟ್ಟಿದ್ದಾನೆ. ಎಂದು ಹೇಳಿದಳು.

ಗುಲಸಾನಾ, ಹೀಗೆ ಮಾಡಬೇಡ. ಇವು ನಿನ್ನ ಜೀವನಾಧಾರ ವಸ್ತುಗಳು. ಇವುಗಳನ್ನು ಕಳೆದುಕೊಂಡರೆ, ನೀನು ಭಿಕ್ಷುಕಳಾಗಿ ಹೋಗುವೆ.

ಶಿಕಂದರಖಾ, ಇದಕ್ಕಾಗಿ ನೀವು ಚಿಂತಿಸಬೇಡರಿ. ನನ್ನ ದೈವದಲ್ಲಿ ಭಿಕ್ಷೆಬೇಡಿ ಹೊಟ್ಟೆತುಂಬಿಕೊಳ್ಳುವದಿದ್ದರೆ, ನಾನು ಅದನ್ನು ಹೇಗೆ ತಪ್ಪಿಸಿಕೊಳ್ಳಬಲ್ಲೆನು!

ಶಿಕಂದರನು. ಬೇರೆಮಾತಾಡದೆ ಹೊರಟು ಹೋದನು. ಗುಲಸಾನೆಯು ಸುಮ್ಮನೆ ಕೂಡಲಿಲ್ಲ. ಅವಳು ಕುಲಸಮಳ ಕೈಯಲ್ಲಿ ಆ ಪೆಟ್ಟಿಗೆಯನ್ನು ಕೊಟ್ಟು, ಶಿಕಂದರನ ಬಳಿಗೆ ಕಳಿಸಿಕೊಟ್ಟಳು. ಶಿಕಂದರನು ನಿರುಪಾಯನಾಗಿ ಆ ಪೆಟ್ಟಿಗೆಯನ್ನು ತೆಗೆದುಕೊಂಡನು;

ಮತ್ತು ಗುಲಸಾನೆಯ ಅಭಿಪ್ರಾಯದಂತೆ ಒಂದು ಬಿನ್ನಹ ಪತ್ರವನ್ನು ಬರೆದು, ಪತ್ರವನ್ನೂ ಆ ಪೆಟ್ಟಿಗೆಯನ್ನೂ ಬಾದಶಹನ ಕಡೆಗೆ ಕಳಿಸಿ ಕೊಟ್ಟನು.



## ಒಂಭತ್ತನೆಯ---ಪರಿಚ್ಛೇದ.



ಶಿಕಂದರನು ಬಾದಶಹನಬಳಿಗೆ ಕಳಿಸಿಕೊಟ್ಟಿದ್ದ ಸೇವಕನು ಒಂದು ತಾಸಿನ ತರುವಾಯ ತಿರುಗಿಬಂದನು. ಅವನೊಡನೆ ಶಸ್ತ್ರಧಾರಿಗಳಾದ ನಾಲ್ವರು ಸೇವಕರಿದ್ದರು. ಅವರು ಒಂದು ಶಿಬಿಕೆಯನ್ನು ತಕ್ಕೊಂಡು ಬಂದಿದ್ದರು.

ಬಾದಶಹನು ಒಂದು ಪತ್ರವನ್ನು ಬರೆದುಕೊಟ್ಟಿದ್ದನು. ಶಿಕಂದರನು ಅದನ್ನು ಓದಿಕೊಂಡನು. ಅದರ ಸಾರಾಂಶವೇನಂದರೆ— "ಸೋಹಾನಿಯ ಸಾಧ್ವಿಯಾದ ಹೆಂಡತಿಯ ಪ್ರಸ್ತಾಪವನ್ನು ನಾನು ಒಪ್ಪಿಕೊಂಡಿದ್ದೇನೆ. ಈಗ ನಾನು ಅವಳ ದರ್ಶನವನ್ನು ತೆಗೆದು ಕೊಳ್ಳಬೇಕೆಂದು ಮಾಡಿದ್ದೇನೆ. ಅವಳನ್ನು ಇಲ್ಲಿಗೆ ಕಳಿಸಿಕೊಡಬೇಕು"

ಶಿಕಂದರನು ಈ ಪತ್ರವನ್ನು ತೆಗೆದುಕೊಂಡು, ಗುಲಸಾನೆಯ ಬಳಿಗೆ ಹೋದನು. ಅದನ್ನು ಅವಳಿಗೆ ಕೊಟ್ಟನು. ಗುಲಸಾನೆಯು ಅದನ್ನು ಓದಿಕೊಂಡು, ತಿರುಗಿ ಶಿಕಂದರನಿಗೆ ಕೊಟ್ಟಳು. ತರುವಾಯ ಅವಳು ವಿಚಾರಮಾಡುತ್ತ ನಿಂತುಕೊಂಡಳು.

ಗುಲಸಾನೆಯು ಸುಮ್ಮನೆ ನಿಂತಿರುವದನ್ನು ನೋಡಿ, ಶಿಕಂದರನು—"ಬಾದಶಹನು ನಿನ್ನನ್ನು ಕರೆದುಕೊಂಡು ಬರುವದಕ್ಕಾಗಿ ಶಿಬಿಕೆಯನ್ನೂ, ಸೇವಕರನ್ನೂ ಕಳಿಸಿದ್ದಾನೆ. ಇಂದು ಸಾಯಂಕಾಲ ಪಲ್ಲಿ ಸೋಹಾನಿಯ ಸ್ಮಶಾನಯಾತ್ರೆಯಾಗತಕ್ಕದ್ದಿದೆ. ಅದಕ್ಕಾಗಿ

ಬಾದಶಹನು ನಿನ್ನನ್ನು ಕರೆಯಿಸಿರಬಹುದು. ಬಾದಶಹನ ಸೇವಕರು ನಿನ್ನ ಹಾದೀನೋಡುತ್ತ ಹೊರಗೆ ನಿಂತಿದ್ದಾರೆ,"ಎಂದು ಹೇಳಿದನು.

ಬಾದಶಹನ ನಿಮಂತ್ರಣದಂತೆ ನಾನು ಹೋಗಲಿಕ್ಕೆ ಸಿದ್ಧಳಾಗಿದ್ದೇನೆ. ಮುಂದೆ ಏನೇ ಆಗಲಿ, ನಾನದನ್ನು ಈಗ ವಿಚಾರಿಸುತ್ತ ಕುಳಿತುಕೊಳ್ಳುವದಿಲ್ಲ. ಅಕಬರಬಾದಶಹನು ಉದಾರಚರಿತನೆಂದು ನಾನು ಕೇಳಿದ್ದೇನೆ. ಇಂದು ಇದರ ಪ್ರತ್ಯಕ್ಷ ಅನುಭವವನ್ನು ತೆಗೆದುಕೊಳ್ಳ ಬೇಕಾಗಿದೆ. ನಡೆಯಿರಿ, ನಾನು ಬರುತ್ತೇನೆ.

ಇಂಥ ದೀನವೇಷದಿಂದಲೇ ನೀನು ಬಾದಶಹನ ಬಳಿಗೆ ಹೋಗು ವೆಯಾ? ಇದು ನನಗೆ ನೆಟ್ಟಗೆ ಕಾಣಿಸುವದಿಲ್ಲ. ಬೇರೆ ಉತ್ತಮ ವಾದ ವಸ್ತ್ರಗಳನ್ನು ಧರಿಸಿದರೆ ನೆಟ್ಟಗಾಗುವದು.

ಶಿಕಂದರಖಾ, ಇನ್ನು ವಸ್ತ್ರ-ಭೂಷಣಗಳ ಸೊಬಗು ನನಗೆಲ್ಲಿ? ನಾನು ವಿಧವೆಯು. ಅಕಾಲದಲ್ಲಿ ಅಕಸ್ಮಾತ್ತಾಗಿ ಒದಗಿದ ಈ ವೈಧವ್ಯ ದಿಂದ ನಾನು ಹುಚ್ಚಿಯಾಗಿ ಹೋಗಿದ್ದೇನೆ.

ಶಿಕಂದರನು ಬೇರೆ ಮಾತಾಡದೆ ಹೊರಟನು. ಗುಲಸಾನೆಯು ಅವನನ್ನನುಸರಿಸಿ ನಡೆದಳು. ಹೊರಗೆ ಶಿಬಿಕೆಯು ಇತ್ತು. ಸೇವಕರು ಗುಲಸಾನೆಯ ಬರುವಿಕೆಯನ್ನು ಕಾಯ್ದುಕೊಂಡಿದ್ದರು. ಶಿಕಂದರನು ಗುಲಸಾನೆಯ ಸಂಗಡ ಕುಲಸಮಳನ್ನು ಕಳಿಸಿಕೊಟ್ಟನು. ಇಬ್ಬರೂ ಶಿಬಿಕೆಯನ್ನೇರಿದರು. ಸೇವಕರು ಅದನ್ನು ಹೊತ್ತುಕೊಂಡು, ಅರ ಮನೆಯ ಕಡೆಗೆ ನಡೆದರು.

ಸಾಯಂಕಾಲದ ಸುಮಾರಕ್ಕೆ ಸೋಹಾನಿಯ ದಫನವಿಧಿಯು ನೆರವೇರತಕ್ಕದ್ದಿತ್ತು. ಈ ಕೆಲಸವನ್ನು ಸಾಗಿಸುವದಕ್ಕೆ ಪ್ರತ್ಯಕ್ಷ ಬಾದಶಹನು ಬರತಕ್ಕವನಿದ್ದನು. ಕಾರಣ ಶಿಕಂದರನು ಸೋಹಾನಿಯ ಈ ಸ್ಮಶಾನಯಾತ್ರೆಗೆ ಹೋಗಲೇಬೇಕಾಗಿತ್ತು. ಅದರಂತೆ ಅವನು ಒಂದುತಾಸು ಹೊತ್ತಿರುವಾಗಲೇ ಮನೆಯಿಂದ ಹೊರಟನು.

ನಾಲ್ವರು ಸೋಹಾನಿಯ ಶವವನ್ನು ಹೊತ್ತಿದ್ದರು. ಅಸಂಖ್ಯ ಸೈನಿಕರು ಎಡಬಲಗಳಲ್ಲಿ ಸಾಲಾಗಿ ನಡೆದಿದ್ದರು. ಶವದ ಮುಂಭಾಗ

ದಲ್ಲಿ ಫಕೀರರು ಕುರಾನವನ್ನು ಪಠಿಸುತ್ತ ನಡೆದಿದ್ದರು. ಹಿಂಭಾಗ ದಲ್ಲಿ ಅಶ್ವಾರೋಹಿಗಳೂ, ಮಾವುತರೂ ನಡೆದಿದ್ದರು. ಇವರಹಿಂದೆ ಬಾದಶಹನೂ, ರಾಜಪುತ್ರರೂ, ಮಂತ್ರಿ—ಸೇನಾಪತಿಗಳೂ ಇದ್ದರು. ಬಾದಶಹನೂ, ರಾಜಕುಮಾರರೂ ಅಂಬಾರಿಯಲ್ಲಿ ಕುಳಿತುನಡೆದಿದ್ದರು. ಅಮೀರ—ಉಮರಾವರೂ, ಮಂತ್ರಿಸೇನಾಪತಿಗಳೂ ಕುದುರೆಗಳನ್ನೇರಿ ಸಾಗಿದ್ದರು. ಇಂದು ಈ ಸ್ಮಶಾನಯಾತ್ರೆಗೆ ಆಗ್ರಾದೊಳಗಿನ ಪ್ರಮುಖ ಜನರೆಲ್ಲರೂ ಕೂಡಿದ್ದರು.

ಶವವು ನಿರ್ದಿಷ್ಟಸ್ಥಳಕ್ಕೆ ತರಲ್ಪಟ್ಟಿತು. ಎಲ್ಲರೂ ಉಷ್ಣೀಯ ವನ್ನು ತೆಗೆದು ಸಮಾಧಿಸ್ಥಳದಲ್ಲಿ ಪ್ರವೇಶಿಸಿದರು. ಅಲ್ಲಿ ಆಗಬೇಕಾ ಗಿದ್ದ ವಿಧಿಗಳೆಲ್ಲವೂ ಜರುಗಿಸಲ್ಪಟ್ಟವು. ಪ್ರತ್ಯಕ್ಷಬಾದಶಹನೂ, ಯುವರಾಜ ಸೇಲೀಮನೂ ಹೆಣವನ್ನು ಹಿಡಿದು ಅದನ್ನು ಮೆಲ್ಲನೆ ಕುಣಿಯಲ್ಲಿರಿಸಿದರು. ಎಲ್ಲರೂ ಮೇಲೆ ಮಣ್ಣನ್ನು ಚಲ್ಲಿದರು. ಸೋಹಾನಿಯ ದೇಹವು ಕಾಣದಂತಾಯಿತು.

ಅಕಬರಬಾದಶಹನು ಕೂಡಿದ ಜನರನ್ನುದ್ದೇಶಿಸಿ—“ ಕೇವಲ ಇಬ್ಬರು ವೀರರು ಮಾತ್ರ ಕಡೆತನಕ ನನ್ನೊಡನೆ ವಿರೋಧದಿಂದಿದ್ದರು. ಅವರು ನನ್ನ ಅಂಕೆಯನ್ನೆಂದೂ ಒಪ್ಪಿಕೊಳ್ಳಲಿಲ್ಲ. ಇವರಲ್ಲಿ ಚಿತೋ ಡದ ಮಹರಾಣಾ ಪ್ರತಾಪಸಿಂಹನೊಬ್ಬನು, ಈ ಸೋಹಾನಿಯು ಮತ್ತೊಬ್ಬನು. ಒಂದುವೇಳೆ ಸೋಹಾನಿಯು ಸಜೀವದಿಂದ ನನ್ನ ಬಳಿಗೆ ಬಂದಿದ್ದರೆ, ನಾನು ಅವನನ್ನು ಶಿಕ್ಷಿಸುತ್ತಿದ್ದಿಲ್ಲ; ಸ್ನೇಹಿತನೆಂದು ತಿಳಿದು ಪ್ರೇಮದಿಂದ ವ್ಯವಹರಿಸುತ್ತಿದ್ದೆನು; ಯಾಕಂದರೆ, ವೀರತ್ವದ ಸನ್ಮಾನವನ್ನು ಕಾಯುವದು ಪ್ರತಿಯೊಬ್ಬ ಶೂರನ ಶ್ರೇಷ್ಠಕರ್ತವ್ಯವು. ಆದಕ್ಕಾಗಿಯೇ ನಾನು ಇಂದು ಸೋಹಾನಿಯ ಸ್ಮಶಾನಯಾತ್ರೆಯನ್ನು ಇಷ್ಟು ವಿಜೃಂಭಣೆಯಿಂದ ಜರುಗಿಸಿದೆನು—ಸ್ವತಃ ನಾನು ಈ ಪವಿತ್ರ ಕೆಲಸದ ಒಂದು ಭಾಗವನ್ನು ಕೈಕೊಂಡೆನು.” ಎಂದು ಹೇಳಿದನು.

ತರುವಾಯ ಬಾದಶಹನು ಗುಲಸಾನೆಯನ್ನುದ್ದೇಶಿಸಿ— “ಸಾಧ್ವಿಯೇ, ನಾನು ನಿನ್ನ ಮನೋಭಾವನೆಯನ್ನು ತಿಳಿದಿದ್ದೇನೆ.

ಪತಿವ್ರತೆಯರ ಪವಿತ್ರಕರ್ತವ್ಯದಿಂದ ನಿನ್ನನ್ನು ವಂಚಿತಳನ್ನಾಗಿ ಮಾಡುವ ಇಚ್ಛೆಯು ನನಗಿಲ್ಲ. ಈ ಶಿಕಂದರಖಾನನು ಇಂದು ನಿನ್ನನ್ನು ಅರಮನೆಗೆ ಮುಟ್ಟಿಸುವನು. ಅಲ್ಲಿ ನೀನು ಬೇಕಾದಂತೆ ಇರಬಹುದು, ನಿನಗೆ ಯಾರಿಂದಲೂ ತೊಂದರೆಯಾಗದು. ನೀನು ಬೇಕಾದಾಗ ಈ ಸಮಾಧಿಯ ಸ್ಥಳಕ್ಕೆ ಬರಬಹುದು. ನಿನಗೆ ಧನದ ಅವಶ್ಯಕತೆಯಿ ದ್ದಾಗ, ನಾನು ನಿನಗೆ ಬೇಡಿದಷ್ಟು ಹಣವನ್ನು ಕೊಡುವೆನು," ಎಂದು ಹೇಳಿದನು.

ಬಾದಶಹನು ಹೊರಟುನಡೆದನು. ಕೂಡಿದ ಜನರೂ ತಮ್ಮತಮ್ಮ ಮನೆಗಳಿಗೆ ನಡೆದರು. ಗುಲಸಾನಿಯು ಪತಿಯ ಸಮಾಧಿಯ ಮೇಲೆ ಬಿದ್ದು, ಹೊರಳಾಡುತ್ತ—"ಪ್ರಾಣನಾಥ, ನನ್ನನ್ನು ಬಿಟ್ಟುಹೋದೆ ಯಲ್ಲ! ಆದರೂ ನಾನು ನಿನ್ನನ್ನು ಮರೆಯುವಳಲ್ಲ. ನಿನ್ನ ಧ್ಯಾನದ ಲ್ಲಿಯೂ, ಈ ಸಮಾಧಿಯ ಸೇವೆಯಲ್ಲಿಯೂ ಕಾಲಕಳೆದು, ಬೇಗನೆ ನಿನ್ನ ಬಳಿಗೆ ಬರುವೆನು," ಎಂದು ಅಂದು ಅಳಹತ್ತಿದಳು.

ಸಾಯಂಕಾಲವಾಗಿ ಹೋಗಿತ್ತು. ಅಮಾವಾಸ್ಯೆಯ ಕಗ್ಗತ್ತಲು ಸುತ್ತಲೂ ವ್ಯಾಪಿಸಿಬಿಟ್ಟಿತ್ತು. ಆದರೂ ಗುಲಸಾನೆಯು ಏಳಲಿಲ್ಲ. ಶಾಂತ ಳಾಗಲಿಲ್ಲ. ಶಿಕಂದರನು ಅವಳ ಬಳಿಗೆಹೋಗಿ— "ಗುಲಸಾನಾ, ಇನ್ನು ಅತ್ತು ಉಪಯೋಗವಿಲ್ಲ. ನಡೆ. ಬಾದಶಹನ ಅಪ್ಪಣೆಯಂತೆ ನಾನು ನಿನ್ನನ್ನು ಅರಮನೆಗೆ ಮುಟ್ಟಿಸುವೆನು, ಎಂದು ಹೇಳಿದನು.

ಗುಲಸಾನೆಯು ಎದ್ದು ನಿಂತು ತಿರಸ್ಕಾರದಿಂದ— "ಶಿಕಂದರಖಾ, ಇನ್ನೆಲ್ಲಿಗೆ ಬರಲಿ? ನನಗೆ ಇನ್ನು ಸ್ಥಳವೆಲ್ಲಿ? ನೀನು ನನಗೆ ನಿಲ್ಲಲಿಕ್ಕೆ ಸ್ಥಳವಿಲ್ಲದಂತೆ ಮಾಡಿಬಿಟ್ಟೆ! ನಾನು ನಿನಗೇನು ಕೆಡಕು ಮಾಡಿದ್ದೆನು! ಏತಕ್ಕಾಗಿ ಈ ರೀತಿ ಸರ್ವಸ್ವೀಘಾತಮಾಡಿದಿ" ಎಂದು ಕೇಳಿದಳು.

ಶಿಕಂದರನು ಮಾತಾಡದೆ, ಆಗ್ರಹದಿಂದ ಅವಳನ್ನು ಕರೆದು ಕೊಂಡು ಹೋದನು. ಸಮೀಪದಲ್ಲಿಯೇ ಶಿಬಿಕೆಯೂ, ಸೇವಕರೂ ಇದ್ದರು. ಶಿಕಂದರನು ಗುಲಸಾನೆಯನ್ನು ಅದರಲ್ಲಿ ಕುಳ್ಳಿರಿಸಿದನು. ಸೇವಕರು ಶಿಬಿ ಕೆಯನ್ನು ಹೊತ್ತುಕೊಂಡುನಡೆದರು. ಶಿಕಂದರನು ಗುಲಸಾನೆಯನ್ನುಅರ

ಮನೆಗೆಮುಟ್ಟಿಸಿ, ಅನುತಪ್ತಹೃದಯದಿಂದಲೂ, ಅಶ್ರುಪೂರ್ಣಕಣ್ಣುಗಳಿಂದಲೂ ಮನೆಯಕಡೆಗೆಹೊರಟನು. ಹಾದಿಯಲ್ಲಿ ಅವನು—"ಅಯ್ಯೋ, ಪುಕ್ಕಟೆಯಾಗಿಸಿಕ್ಕ ಚಿತ್ರವನ್ನು ತೆಗೆದುಕೊಂಡು, ಎಂಥ ಘೋರ ಸಂಕಟವನ್ನು ತಂದುಕೊಂಡೆನಲ್ಲ!" ಎಂದಂದುಕೊಂಡು, ಹಣೆಹಣೆ ಗಟ್ಟಿಸಿಕೊಂಡನು.

## ಹತ್ತನೆಯ-ಪರಿಚ್ಛೇದ.

ಶಿಕಂದರನು ಮರುದಿವಸ ಮುಂಜಾನೆ ನಸುಕಿನಲ್ಲಿಯೇ ಹಾಸುಗೆಯಿಂದೆದ್ದಿದ್ದನು. ಪ್ರಾತಃಕೃತ್ಯಗಳನ್ನು ತೀರಿಸಿಕೊಂಡು, ಚಂದ್ರಶಾಲೆಗೆ ಬಂದನು. ಪ್ರಭಾತಕಾಲದ ಸುಳಿಗಾಳಿಯು ಬೀಸುತಲಿತ್ತು. ಹಿಂದಿನದಿವಸದ ಸಂಗತಿಗಳಿಂದ ವ್ಯಥಿತವಾದ ಅವನ ಹೃದಯವು ಈ ವಾಯುಸೇವನೆಯಿಂದ ತುಸು ಶಾಂತವಾಯಿತು. ಅವನು ಮಾರ್ಗದಕಡೆಗೆ ನೋಡಿದನು. ಒಬ್ಬ ಮೊಗಲ ಸವಾರನು ಕುದುರೆಯನ್ನೋಡಿಸುತ್ತ ತನ್ನ ಮನೆಯಕಡೆಗೆ ಬರುತ್ತಿರುವದು ಕಂಡುಬಂತು. ಇಂತಹ ವೇಳೆಯಲ್ಲಿ ಅವನು ತನ್ನಕಡೆಗೆ ಏಕೆ ಬರುತ್ತಿರಬಹುದಾದೀತೆಂದು ಶಿಕಂದರನು ಯೋಚಿಸಹತ್ತಿದನು. ಬಾದಶಹನು ದುಃಖಿತಳಾದ ಗುಲಸಾನೆಯನ್ನು ಶಾಂತಮಾಡಲಾರದವನಾಗಿ, ನನ್ನನ್ನು ಕರೆಯ ಕಳುಹಿರಬಹುದೆಂದು ಭಾವಿಸಿದನು. ಅವನು ಕೆಳಗಿಳಿದು ಬಂದು ನೋಡಿದನು. ಬಾಗಿಲಲ್ಲಿ ಇಬ್ಬರು ಶಿಪಾಯಿಗಳು ಕುಳಿತುಕೊಂಡಿದ್ದರು. ಆ ಶಿಪಾಯಿಗಳು ಶಿಕಂದರನನ್ನು ನೋಡಿ, ತಾತ್ಸಾರದಿಂದ ಸಲಾಂ ಮಾಡಿದರು. ಶಿಕಂದರನು ಶಿಪಾಯಿಗಳ ಈ ವೃತ್ತಿಯನ್ನು ತಿಳಿದನು. ಅವರು ತನ್ನ ವಿಷಯದಲ್ಲಿ ಈ ಭಾವನೆಯನ್ನೇಕೆ ತಳೆದಿದ್ದಾರೆಂಬದು ಅವನಿಗೆ ಗೊತ್ತಾಗಲಿಲ್ಲ. ಅವರಲ್ಲೊಬ್ಬನ ಹೆಸರು ಅವನಿಗೆ ಗೊತ್ತಿತ್ತು. ಶಿಕಂದರನು ಆ ಶಿಪಾಯಿಯನ್ನು ಕುರಿತು—

"ಮುಬಾರಕ, ವರ್ತಮಾನವೇನು?" ಎಂದು ಕೇಳಿದನು.

“ ಬಾದಶಹರವರು ತಮ್ಮನ್ನು ಈ ಮನೆಯಿಂದ ಹೊರಗೆ ಬಿಡಕೂಡದೆಂದು ಅಪ್ಪಣೆ ಮಾಡಿದ್ದಾರೆ. ಅದಕ್ಕಾಗಿ ನಾವು ಇಲ್ಲಿ ಕುಳಿತುಕೊಂಡಿರುವೆವು. ” ಎಂದು ಆ ಶಿಪಾಯಿಯು ಹೇಳಿದನು.

ಶಿಕಂದರನ ಮೋರೆಯು ಕಪ್ಪಿಟ್ಟು ಹೋಯಿತು. ಅವನು ಇನ್ನು ತನ್ನ ದುರದೃಷ್ಟದ ಆಟವು ಪ್ರಾರಂಭವಾಯಿತೆಂದು ಭಾವಿಸಿದನು. ಈ ಸಮಯದಲ್ಲಿ ಸವಾರನು ಬಂದು ಅವನಕೈಯಲ್ಲಿ ಒಂದು ಪತ್ರವನ್ನು ಕೊಟ್ಟನು. ಶಿಕಂದರನು ಅದನ್ನೋದಿಕೊಂಡು, ಅತ್ಯಂತ ದುಃಖಿತನಾದನು. ಸಮಗ್ರಬ್ರಹ್ಮಾಂಡವು ತನ್ನ ಸುತ್ತಲೂ ತಿರುಗುತ್ತಿರುವಂತೆ ಅವನಿಗೆ ಭಾಸವಾಯಿತು. ಬಾದಶಹನ ಆಜ್ಞಾಪತ್ರವಲ್ಲಿ ಅಪರಾಧದ ವಿಚಾರಣೆಗಾಗಿ, ಕೂಡಲೇ ನ್ಯಾಯಸಭೆಗೆ ಬರುವಂತೆ ಬರೆಯಲ್ಪಟ್ಟಿತ್ತು. ಶಿಕಂದರನು ಕಾವಲುಗಾರರಿಂದ ಸುತ್ತುಗಟ್ಟಲ್ಪಟ್ಟವನಾಗಿ ನ್ಯಾಯವಿಚಾರಣೆಯ ಮಂದಿರಕ್ಕೆ ಹೋದನು.

ಬಾದಶಹನು ತನ್ನ ದಿವಾಣಖಾನೆಯಲ್ಲಿ ಕುಳಿತುಕೊಂಡಿದ್ದನು. ಬಳಿಯಲ್ಲಿ ಬೇರೆ ದೊಡ್ಡ ಮನುಷ್ಯರಾರೂ ಇರಲಿಲ್ಲ. ಇಬ್ಬರು ಖೋಜಾಗಳೂ, ಇಬ್ಬರು ಶಿಪಾಯಿಗಳೂ ಇದ್ದರು. ಶಿಕಂದರನು ಬಾದಶಹನ ಬಳಿಗೆ ಬಂದು, ಕುರ್ನಿಸಮಾಡಿ ನಿಂತುಕೊಂಡನು. ಬಾದಶಹನು ಗಂಭೀರಸ್ವರದಿಂದ—“ ಶಿಕಂದರಖಾ, ನಾನು ಒಂದು ಮಹತ್ವದ ಕೆಲಸವನ್ನು ನಿನಗೆ ಒಪ್ಪಿಸಿದ್ದೆನು; ಆದರೆ ನೀನು ಒಬ್ಬ ಹೆಂಗಸಿನ ರೂಪಕ್ಕೆ ಮರುಳಾಗಿ, ನನ್ನ ಮರ್ಯಾದೆಯನ್ನೂ, ಗೌರವವನ್ನೂ ಕಳೆಯಲಿಕ್ಕೆ ಮನಸ್ಸು ಮಾಡಿದೆ! ಒಂದುವೇಳೆ ಸೋಹಾನಿಯು ಬದುಕಿದ್ದರೆ, ಅವನು ಸೈನ್ಯವನ್ನು ಕೂಡಿಸಿಕೊಂಡು, ಮತ್ತೆ ಈದಲಗಡವನ್ನು ಕೈವಶಮಾಡಿಕೊಳ್ಳುವ ಉದ್ಯೋಗಕ್ಕೆ ತೊಡಗುತ್ತಿದ್ದನು. ಇದರಿಂದ ಮತ್ತೆ ನಾನು ಗೊಂದಲಕ್ಕೊಳಗಾಗಬೇಕಾಗುತ್ತಿತ್ತು. ನೀನು ವಿಕಾರಕ್ಕೊಳಗಾಗಿ ಆಚರಿಸಿದ ಈ ಅಪರಾಧವು ಕ್ಷಮಾರ್ಹವಾದದ್ದಲ್ಲ! ಒಂದು ವೇಳೆ ಯುವರಾಜ ಸೇಲೀಮನು ಇಂಥ ಅಪರಾಧವನ್ನು ಮಾಡಿದ್ದರೆ, ನಾನು ಅವನನ್ನು ಶಿಕ್ಷಿಸದೆ ಇರುತ್ತಿದ್ದಿಲ್ಲ! ನೀನು ಈ ಒಳಗಾಗಿ ನನಗೆ ಅನೇಕ ಸಾರೆ ಸಹಾಯಮಾಡಿ

ರುವೆ. ಅದಕ್ಕಾಗಿ ನಾನು ನಿನಗೆ ಮರಣದಂಡನೆಯನ್ನು ವಿಧಿಸುವದಿಲ್ಲ. ನಿನಗೆ ನಾನು ಆಮರಣಬಂದಿವಾಸದ ಶಿಕ್ಷೆಯನ್ನು ವಿಧಿಸಿದ್ದೇನೆ," ಎಂದು ಹೇಳಿದನು.

ಶಿಕಂದರನಿಗೆ ವಜ್ರಘಾತವಾದಂತಾಯಿತು. ಅವನ ಕಣ್ಣಿಗೆ ಎತ್ತ ನೋಡಿದತ್ತ ಕಗ್ಗತ್ತಲೆಯೇ ಕಾಣಿಸಹತ್ತಿತು. ಅವನು ಮನಸ್ಸಿನಲ್ಲಿಯೇ—"ಭೂದೇವಿಯೇ, ನನಗೆ ಸ್ಥಳಕೊಡು. ನಿನ್ನ ಉದರದಲ್ಲಿ ನನ್ನನ್ನು ಮುಚ್ಚಿಕೊಂಡುಬಿಡು; ಅಂದರೆ ನಾನು ಈ ಯಾತನೆಯಿಂದ ಮುಕ್ತನಾಗುವೆನು," ಎಂದು ಬೇಡಿಕೊಂಡನು.

ಬಾದಶಹನು ಗಂಭೀರ ಸ್ವರದಿಂದ—"ಗುಲಸಾನಾ," ಎಂದು ಕರೆದನು.

ಗುಲಸಾನೆಯು ಸಮೀಪದಲ್ಲಿರುವ ಕೋಣೆಯಲ್ಲಿದ್ದಳು. ಅವಳು ಬಾದಶಹನ ಸ್ವರವನ್ನು ಕೇಳಿ, ಕೂಡಲೇ ಬಂದು, ಕುರ್ನಿಸಮಾಡಿ ನಿಂತುಕೊಂಡಳು. ಬಾದಶಹನು ಅವಳನ್ನು ನೋಡಿ,—"ಗುಲಸಾನಾ, ನೀನು ವೀರಪತ್ನಿಯು; ಮಹಾಪತಿವ್ರತೆಯು. ಪತಿಯ ಅಕಾಲಮರಣದ ಸೇಡುತೀರಿಸಿಕೊಳ್ಳುವದಕ್ಕಾಗಿ ಬಿನ್ನಹಮಾಡಿಕೊಂಡಿರುವೆ. ನನ್ನ ನಂಬುಗೆಯ ಸೇನಾಪತಿಯಾದ ಈ ಶಿಕಂದರಖಾನನು, ನಿನ್ನ ಮಾನಭಂಗಕ್ಕೆ ಉದ್ಯುಕ್ತನಾದದ್ದು ಅತ್ಯಂತ ಹೇಯವಾದ ಕೆಲಸವು! ನಾನು ಇವನಿಗೆ ಸಾಯುವವರೆಗೆ ಸೆರೆಮನೆಯಲ್ಲಿ ಕಾಲಕಳೆಯುವ ಶಿಕ್ಷೆಯನ್ನು ಕೊಟ್ಟಿದ್ದೇನೆ." ಎಂದು ಹೇಳಿದನು.

ಶಿಕಂದರನು ಮನಸ್ಸಿನಲ್ಲಿಯೇ ಅಂದುಕೊಂಡು—"ಪಠಾಣರಮಣಿಯ ಸೇಡಿನ ಪ್ರವೃತ್ತಿಯು ಅತಿಭಯಂಕರವಾದದ್ದು! ಗುಲಸಾನೆಯ ಹೃದಯವು ಇಷ್ಟೊಂದು ಕಠೋರವಿದ್ದೀತೆಂದು ನಾನು ಎಣಿಸಿರಲಿಲ್ಲ! ನನ್ನ ಈ ದುರ್ದೆಶೆಗೆ ಇವಳೇ ಕಾರಣಳು. ಇವಳು ಹೆಂಗಸಲ್ಲ! ರಾಕ್ಷಸಿಯು!! ಅಯ್ಯೋ, ನಾನು ಆ ಚಿತ್ರಮಾರುವ ಮುದುಕೆಯ ಬಳಿಯಲ್ಲಿ ಗುಲಸಾನೆಯ ಚಿತ್ರವನ್ನೇಕೆ ಮಾರಲಿಕ್ಕೆ ತೆಗೆದುಕೊಂಡಿದ್ದೇನಾದೀತು? ಚಿತ್ರವನ್ನು ತೆಗೆದುಕೊಂಡರೂ ತೆಗೆದುಕೊಳ್ಳಲಿ. ಇವ

ಳನ್ನು ನೋಡಿ, ಇವಳ ರೂಪಕ್ಕೆ ಮೋಹಿತನಾಗುವ ದುರ್ಬುದ್ಧಿಯು ಏಕೆ ಹುಟ್ಟಿರಬಹುದು? ಚಿತ್ರಮಾರುವವಳು ಈ ಚಿತ್ರದ ಬೆಲೆಯು ಕೇವಲ ಐದುವದೆಕೆಗಳೆಂದು ಹೇಳಿದಳು. ಆದರೆ ನನ್ನ ಹಣೀ ಬರಹವು ಇಷ್ಟರಿಂದ ತೀರಲಿಲ್ಲ. ಆಮರಣ ಸೆರೆಮನೆಯಲ್ಲಿ ವಾಸ ಮಾಡಬೇಕಾಯಿತು! ಇನ್ನೇನುಮಾಡಲಿ? "

ಗುಲಸಾನೆಯು ಮೊಳಕಾಲೂರಿ ಕುಳಿತು, ಕೈಜೋಡಿಸಿ, ಕಣ್ಣೀರುದುರಿಸುತ್ತ—"ಭಾರತಸಾಮ್ರಾಟ, ತಾವು ಅತ್ಯಂತ ಉದಾರಹೃದಯರು. ನೀವು ಅಪರಾಧದ ಯೋಗ್ಯವಿಚಾರಣೆಯನ್ನು ಮಾಡಿದಿರಿ. ನಾನು ನಿಮ್ಮಬಳಿಯಲ್ಲಿ ನ್ಯಾಯವನ್ನು ಹೊಂದಿದೆನು. ಇದನ್ನು ನೋಡಿ, ಈ ದುಃಖದಸಮಯದಲ್ಲಿಯೂ ನನಗೆ ಆನಂದವಾಗುತ್ತಲಿದೆ. ದೇವರು ನಿಮ್ಮನ್ನು ಚಿರಕಾಲವಿಡಲಿ. ಅಖಂಡಸೌಖ್ಯವನ್ನು ಕರುಣಿಸಲಿ. ಇನ್ನು ನನ್ನ ಸೇಡಿನ ಕಲ್ಪನೆಯು ಅಳಿದು ಹೋಯಿತು! ಈಗ ನೀವು ಈ ಶಿಕಂದರಖಾನನನ್ನು ಬಂಧಮುಕ್ತಮಾಡಿ ಬಿಟ್ಟು ಬಿಡಿರಿ," ಎಂದು ಬೇಡಿಕೊಂಡಳು.

ಅಕಬರನು ಕರ್ಕಶಸ್ವರದಿಂದ—"ದಿಲ್ಲಿಯ ಬಾದಶಹನ ಅಪ್ಪಣೆಯು ತಿರುಗಿಸಲಿಕ್ಕೆಬರದಂಥಾದ್ದು! ರಾಜದಂಡವು ಆಟದವಸ್ತುವಲ್ಲ. ರಾಜಾಜ್ಞೆಯು ನಾಟಕದ ಭಾಷಣವಲ್ಲ! ರಾಜಮಂದಿರವು ನಾಟಕದ ಶಾಲೆಯಲ್ಲ! ನೀನು ಅಂತಃಪುರಕ್ಕೆ ಹೋಗು. ಕೆಲವು ದಿವಸ ನೀನು ಈ ಅರಮನೆಯಲ್ಲಿ ವಾಸಿಸು. ನಾನು ನಿನ್ನ ಯಾವತ್ತು ವ್ಯವಸ್ಥೆಯನ್ನು ಮಾಡಿದ್ದೇನೆ. ಮುಂದೆ ನಿನ್ನ ಮನಸ್ಸು ಬಂದಂತೆ ಬೇಕಾದಲ್ಲಿಗೆ ಹೋಗಬಹುದು,"ಎಂದು ಹೇಳಿದನು.

ಗುಲಸಾನೆಯು ಬೇರೆ ಮಾತಾಡದೆ, ವಿಷಾದದಿಂದ ಹೋಗಿ ಬಿಟ್ಟಳು. ಕಾವಲುಗಾರರು ಶಿಕಂದರನನ್ನು ಸೆರೆಮನೆಗೆ ಕರೆದುಕೊಂಡು ಹೋದರು. ಸೆರೆಮನೆಯು ಅಂಧಕಾರ ಪೂರ್ಣವಾಗಿತ್ತು. ಶಿಕಂದರನು ಈ ಕಗ್ಗತ್ತಲೆಯ ಕಾರಾಗ್ರಹದಲ್ಲಿ ಶೋಕಾಕುಲನಾಗಿ ಕುಳಿತುಕೊಂಡನು.

ಶಿಕಂದರನು ಎಷ್ಟೋಹೊತ್ತಿನವರೆಗೆ ಕುಳಿತಿದ್ದನು. ಆ ಕಗ್ಗತ್ತಲೆಯೂ, ನಿರ್ಜನತೆಯೂ ಅವನಿಗೆ ಅತ್ಯಂತ ಬೇಸರವನ್ನುಂಟು ಮಾಡಿದವು. ಅವನು ಚಿಟ್ಟನೇ ಚೀರಿ ಎದ್ದುನಿಂತು—"ನನಗೆ ಈ ರೀತಿ ಕಷ್ಟವನ್ನುಂಟು ಮಾಡಬೇಡಿರಿ! ಬೇಕಾದರೆ ನನ್ನನ್ನು ಕೊಂದು ಬಿಡಿರಿ! ನನಗೆ ಜೀವವು ಬೇಕಾಗಿಲ್ಲ,–ಈ ಅಮಾನುಷ ಕ್ರೂರ ಶಿಕ್ಷಾ ಭೋಗವು ಬೇಕಾಗಿಲ್ಲ!! ಮರಣವು ಬೇಕು !!!" ಎಂದು ಕೂಗಿಕೊಂಡನು.

ಈ ಸಮಯದಲ್ಲಿ ಒಬ್ಬ ಕಾವಲುಗಾರನು ಶಿಕಂದರನ ಬಳಿಗೆ ಬಂದು—"ಇಕೊ, ಅನ್ನ–ನೀರುಗಳನ್ನು ಇಟ್ಟದ್ದೇನೆ. ಹೊಟ್ಟೆಹಸಿದಾಗ ಊಟಮಾಡು. ಬಳಿಯಲ್ಲಿಯೇ ಹುಲ್ಲಿನಹಾಸುಗೆಯಡೆ. ನಿದ್ದೆ ಬಂದಾಗ ಅದರಮೇಲೆ ಮಲಗಿಕೊಳ್ಳು," ಎಂದು ಹೇಳಿದನು. ಶಿಕಂದರನು ಅವನನ್ನು ಕುರಿತು—"ರಾತ್ರಿಯು ಎಷ್ಟಾಗಿರಬಹುದು?" ಎಂದು ಕೇಳಿದನು. ಕಾವಲುಗಾರನು—"ಒಂದು ಪ್ರಹರವಾಗಿ ಹೋಗಿದೆ. ನಿನ್ನ ಸಂಗಡ ಹೆಚ್ಚಿಗೆ ಮಾತಾಡಲಿಕ್ಕೆ ಅಪ್ಪಣೆಯಿಲ್ಲ. ನಾನು ಹೊರಟೆನು" ಎಂದು ಹೇಳಿ, ಹೋಗಿಬಿಟ್ಟನು. ಶಿಕಂದರನು ತನ್ನ ದೈವವನ್ನು ಹಳಿದುಕೊಳ್ಳುತ್ತ ಕುಳಿತುಕೊಂಡನು.

ಶಿಕಂದರನು ಆಹಾರವನ್ನು ಮುಟ್ಟಲಿಲ್ಲ. ಅವನು ಕೆಲಹೊತ್ತಿನವರೆಗೆ ಹಾಗೆಯೇ ಕುಳಿತುಕೊಂಡನು. ತರುವಾಯ ಹಾಸುಗೆಯನ್ನು ಹುಡುಕಿಕೊಂಡು, ಅದರ ಮೇಲೆ ಬಿದ್ದುಕೊಂಡನು. ನಿದ್ದೆಯು ಹತ್ತಲಿಲ್ಲ. ಅತಿ ಕಷ್ಟದಿಂದ ಆ ಹಾಸುಗೆಯಮೇಲೆ ಹೊರಳಾಡಹತ್ತಿದನು. ಈ ಮೇರೆಗೆ ಒಂದೆರಡು ತಾಸುಗಳು ಕಳೆದುಹೋದವು. ಕಡೆಗೆ ಅವನು ಬೇಸತ್ತು ಮತ್ತೆ, ಎದ್ದು ಕುಳಿತುಕೊಂಡನು.

ಕಾರಾಗಾರದ ಬಳಿಯಲ್ಲಿ ಕಾಲಸಪ್ಪಳವಾದಂತೆ ಶಿಕಂದರನಿಗೆ ತಿಳಿಯಿತು. ಅವನು ಮತ್ತೆ ವಿಚಾರಕ್ಕೊಳಗಾದನು. ಬಾದಶಹನು ತನ್ನನ್ನು ಕೊಲ್ಲುವದಕ್ಕಾಗಿ ಕೊಲೆಗಡಕನನ್ನು ಕಳಿಸಿರಬಹುದೆಂದು ಭಾವಿಸಿದನು.

ತುಸುಹೊತ್ತಿನಲ್ಲಿ ಗುಲಸಾನೆಯು ಅಲ್ಲಿಗೆ ಬಂದಳು. ಅವಳು ಶಿಕಂದ

ರನನ್ನು ಕುರಿತು— “ ದೇವರು ನಿನ್ನ ಮೇಲೆ ಪ್ರಸನ್ನನಾಗಿದ್ದಾನೆ. ಅವನು ನಿನ್ನ ಉದ್ಧಾರಕ್ಕಾಗಿ ನನ್ನನ್ನು ಕಳಿಸಿಕೊಟ್ಟಿದ್ದಾನೆ, ” ಎಂದು ಅಂದಳು.

ಶಿಕಂದರನು ಅವಳನ್ನು ಗುರುತಿಸಲಿಲ್ಲ. ಅವನು— “ ನೀನು ಯಾರು? ನನ್ನನ್ನು ಪಾರುಮಾಡಲಿಕ್ಕೆ ಬಂದಿರುವೆಯಾ? ಇದರಲ್ಲಿ ನಿನ್ನ ಉದ್ದೇಶವೇನು? ” ಎಂದು ಕೇಳಿದನು.

“ ಶಿಕಂದರಖಾ, ಪತಿವ್ರತೆಯಾದ ರಮಣಿಯನ್ನು ವೈಧವ್ಯದ ದುಃಖಕ್ಕೆ ಗುರಿಮಾಡಿದ ನಿನ್ನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಹೊಂದಿದೆ! ಈಗ ನಾನು ನಿನ್ನನ್ನು ಇಲ್ಲಿಂದ ಪಾರುಮಾಡುವೆನು. ”

ಶಿಕಂದರನು ಮನಸ್ಸಿನಲ್ಲಿಯೇ ಅಂದುಕೊಂಡು— “ ಇವಳು ಗುಲಸಾನೆಯು! ನನಗೆ ಶಿಕ್ಷೆಯನ್ನು ಕೊಡಿಸಿದವಳು ಇವಳು! ಈಗ ನನ್ನನ್ನು ಪಾರುಮಾಡಲಿಕ್ಕೆ ಬಂದಿದ್ದಾಳಂತೆ! ಎಂಥ ವಿಚಿತ್ರ ವ್ಯಕ್ತಿಯಿದು! ! ಇವಳು ನನ್ನನ್ನು ಪ್ರೀತಿಸುತ್ತಿರಬಹುದೇನು? ಛೆ, ಹೀಗಿರುವ ಸಂಭವವಿಲ್ಲ. ನಾನು ಮಹಾ ಹುಚ್ಚನು! ”

ಚತುರಳಾದ ಗುಲಸಾನೆಯು ಶಿಕಂದರನ ಈ ಮನೋಭಾವವನ್ನು ತಿಳಿದು— “ ಶಿಖಂದರಖಾ, ನಾನು ನಿನ್ನನ್ನು ಪಾರುಮಾಡಲಿಕ್ಕೆ ಬಂದದ್ದಕ್ಕಾಗಿ ನಿನಗೆ ಆಶ್ಚರ್ಯವಾಗಿರಬಹುದು. ಇವಳು ನನ್ನನ್ನು ಪ್ರೀತಿಸುವಳೇನೆಂದು ನೀನು ಭಾವಿಸುತ್ತಿರುವೆಯಾದೀತು. ನಿನ್ನ ಈ ಭಾವನೆಯು ಸರಿಯಾದದ್ದಲ್ಲ. ನಾನು ಪ್ರೇಮಪರವಶಳಾಗಿ ನಿನ್ನನ್ನು ಬಿಡಿಸಬಂದವಳಲ್ಲ; ಅಕಸ್ಮಾತ್ತಾಗಿ ವೈಧವ್ಯಕ್ಕೊಳಗಾದ ನಾನು ನಿನ್ನ ಮೇಲೆ ಸಿಟ್ಟಾದೆನು. ನಿನ್ನನ್ನು ಶಿಕ್ಷಿಸುವದಕ್ಕೆ ಬಾದಶಹನಿಗೆ ಬಿನ್ನಹ ಮಾಡಿಕೊಂಡೆನು. ಅದರಂತೆ ಬಾದಶಹನು ನಿನ್ನನ್ನು ದಂಡಿಸಿದನು; ಆದರೆ ಈಗ ನನಗೆ ಪಶ್ಚಾತ್ತಾಪವಾಗುತ್ತಲಿದೆ. ನಿನ್ನನ್ನು ಸೆರೆಮನೆಯಲ್ಲಿಡಿಸಿದ್ದು ಅನುಚಿತವಾಯಿತೆಂದು ನನ್ನ ಮನಸ್ಸು ನನಗೆ ಹೇಳತೊಡಗಿದೆ; ನೀನು ನನ್ನ ಪತಿಯ ಶವದ ವಿಷಯದಲ್ಲಿ ತುಂಬಾ ಸನ್ಮಾನವನ್ನು ತೋರಿಸಿರುವೆ; ಮತ್ತು ನಾನು ಹೇಳಿದಂತೆ ನಡೆದುಕೊಂಡಿರುವೆ. ನಾನು ನಿನ್ನ

ಈ ಉಪಕಾರವನ್ನು ತೀರಿಸುವವಕ್ಕಾಗಿ ಈಗ ಇಲ್ಲಿಗೆ ಬಂದಿದ್ದೇನೆ. ಕಾಲ ವಿಲಂಬ ಮಾಡಬೇಡ. ಬೇಗನೆ ಏಳು. ನಾನು ಕಾವಲುಗಾರರಿಗೆ ಲಂಚ ಕೊಟ್ಟು ಅವರನ್ನು ಕೈಯಲ್ಲಿ ತೆಗೆದುಕೊಂಡಿದ್ದೇನೆ, ನೀನು ಸುಸೂತ್ರ ವಾಗಿ ಪಾರಾಗಿಹೋಗು. ” ಎಂದು ಹೇಳಿದಳು.

ಶಿಕಂದರನಿಗೆ ಕಾರಾಗ್ರಹವಾಸವು ಅತ್ಯಂತ ದುಃಖವನ್ನುಂಟುಮಾಡಿತ್ತು. ಯಾವದೇ ರೀತಿಯಿಂದಾಗಲಿ, ಪಾರಾಗಿಹೋದರೆ ಸಾಕೆಂದು ಅವನಿಗೆ ಅನಿಸಿತ್ತು. ಕಾರಣ ಅವನು ಗುಲಸಾನೆಯ ಪ್ರಸ್ತಾಪಕ್ಕೆ ಒಪಿಕೊಂಡು, ಅವಳ ಹಿಂದಿಂದ ಹೋದನು.

ಕಾವಲುಗಾರರು ಇವರಿಗೆ ಪ್ರತಿಬಂಧಮಾಡಲಿಲ್ಲ. ಗುಲಸಾನೆಯು ಶಿಕಂದರನನ್ನು ಯಮುನಾತೀರಕ್ಕೆ ಕರೆತಂದಳು. ಅಲ್ಲಿ ಒಂದು ಡೋಣಿಯು ಇವರ ಮಾರ್ಗಪ್ರತೀಕ್ಷೆಮಾಡುತಲಿತ್ತು. ಗುಲಸಾನೆಯು ಶಿಕಂದರನಿಗೆ ಆ ಡೋಣಿಯನ್ನೇರುವದಕ್ಕೆ ಹೇಳಿದಳು. ಶಿಕಂದರನು ಆಶ್ಚರ್ಯದಿಂದ— “ ನೀನೆಲ್ಲಿಗೆ ಹೋಗುವೆ? ನನ್ನ ಸಂಗಡ ಬಂದುಬಿಡು; ಎಂದು ಹೇಳಿದನು.

ನೀನು ಇನ್ನು ವಿಕಾರವನ್ನು ಗೆಲ್ಲಲಾರದವನಾಗಿರುವೆ. ಅದಕ್ಕಾಗಿ ನಾನು ನಿನ್ನೊಡನೆ ಬರಲಾರೆನು. ನಾನು ಬೇರೆಕಡೆಗೆ ಹೋಗುವೆನು, ” ಎಂದು ಗುಲಸಾನೆಯು ಹೇಳಿದಳು.

ಶಿಕಂದರನು ಡೋಣಿಯನ್ನೇರಿದನು. ಗುಲಸಾನೆಯು ಒಂದು ಜಡವಾದ ಗಂಟನ್ನು ಡೋಣಿಯಲ್ಲಿ ಒಗೆದು— “ ಶಿಕಂದರಖಾ, ಇದನ್ನು ತೆಗೆದುಕೊಳ್ಳು; ಪ್ರಸಂಗವಿಶೇಷದಲ್ಲಿ ನಿನಗೆ ಉಪಯೋಗಬೀಳುವದು, ” ಎಂದು ಹೇಳಿದಳು.

ಶಿಕಂದರನು ಅದನ್ನು ತೆಗೆದುಕೊಂಡು ನೋಡಿದನು. ಅದು ಹಣದಿಂದ ತುಂಬಿತ್ತು. ಗುಲಸಾನೆಯ ಈ ವ್ಯವಹಾರವನ್ನು ನೋಡಿ, ಅವನಿಗೆ ಅತಿಶಯ ವಿಸ್ಮಯವಾಯಿತು. ಡೋಣಿಯು ವಾಯುವೇಗದಿಂದ ಮುಂದೆ ನಡೆಯಿತು.

ಮುಂದೆ ಶಿಕಂದರನು ಮೂರಪಲ್ಲಿರುವ ವಾಜಬಹದ್ದರನೆಂಬ ಸಂಸ್ಥಾ

ನಿಕರ ಆಶ್ರಯವನ್ನು ಹೊಂದಿ, ಆಗ್ರಾನಗರವನ್ನು ಮರೆತು ಸುಖದಿಂದ ಇದ್ದನು. ಗುಲಸಾನೆಯು ಎಲ್ಲಿಹೋದಳೆಂಬದು ಯಾರಿಗೂ ಗೊತ್ತಾಗಲಿಲ್ಲ. ಸೇಖಜಿಯೂ ಕುಲಸಮುಳೂ ಮಾತ್ರ ಆಗ್ರಾದಲ್ಲಿಯೇ ಮನೆಮಾಡಿಕೊಂಡು ಇರಹತ್ತಿದರು.

ಸಮಾಪ್ತ.



# ಸೂಚನೆ.

ಪ್ರಸಿದ್ಧ ಲೇಖಕರಾದ ಗಳಗನಾಥರವರು ಬರೆದಿರುವ ಕೆಳಗಿನ ಪುಸ್ತಕಗಳು ಮಾರಾಟಕ್ಕೆ ಸಿದ್ಧವಾಗಿರುವವು. ಅವುಗಳ ಪ್ರಸಿದ್ಧಿಯು ಕರ್ನಾಟಕದಲ್ಲಿರುವದರಿಂದ, ಅವುಗಳ ಗುಣವರ್ಣನವನ್ನು ಹೊಸದಾಗಿ ಮಾಡಲವಶ್ಯವಿಲ್ಲ. ಪುಸ್ತಕಗಳ ಯೋಗ್ಯತೆಯನ್ನು ಅನುಭವದಿಂದ ಮನಗಾಣಬಹುದು.

## (ಪುಸ್ತಕಗಳ ಕ್ರಮದ ವಿವರ.)

| | | | | | |
|---|---|---|---|---|---|
| ೧ | ಮಾಧವ ಕರುಣಾವಿಲಾಸ | ೩-೧೨-೦ | ೧೦ | ಕುರುಕ್ಷೇತ್ರ | ೧-೦-೦ |
| ೨ | ಮಹಾ ಭಾರತಾಮೃತ (ಆದಿಪರ್ವ) | ೩-೮-೦ | ೧೧ | ವೇಂಕಟೇಶ ಮಹಾತ್ಮ್ಯೆ | ೧-೦-೦ |
| | | | ೧೨ | ರಾಣಾ-ರಾಜಸಿಂಹ | ೦-೧೨-೦ |
| ೩ | ಶೈವಸುಧಾರ್ಣವ | ೩-೮-೦ | ೧೩ | ಗುರುಪ್ರಸಾದ | ೦-೧೨-೦ |
| ೪ | ಭಾಗವತಾಮೃತ | ೩-೮-೦ | ೧೪ | ಸದ್ಗುರು ಪ್ರಭಾವ | ೦-೧೨-೦ |
| ೫ | ಶ್ರೀ ತುಲಸೀರಾಮಾಯಣ | ೩-೦-೦ | ೧೫ | ಸುಂದರಲೇಖ ಸಮುಚ್ಚಯ | ೦-೮-೦ |
| ೬ | ಪ್ರಬುದ್ಧ ಪದ್ಮನಯನೆ | ೧-೦-೦ | ೧೬ | ಭಗವತೀ ಕಾತ್ಯಾಯನೀ | ೦-೮-೦ |
| ೭ | ಧಾರ್ಮಿಕತೇಜ | ೧-೮-೦ | ೧೭ | ನಿರ್ಯಾಣ ಮಹೋತ್ಸವ | ೦-೮-೦ |
| ೮ | ಕರ್ಮಕಥೆ | ೧-೮-೦ | ೧೮ | ದಾಂಪತ್ಯ | ೦-೮-೦ |
| ೯ | ಈಶ್ವರೀ ಸೂತ್ರ | ೧-೦-೦ | ೧೯ | ವಿಕಾರ ವಿನಾಶ | ೦-೧೦-೦ |

ಕಮಲಕುಮಾರಿ, ಛತ್ರಪತಿ, ಗೃಹಕಲಹ, ಶಿವಪ್ರಭುವಿನ ಪುಣ್ಯ, ಮರಾಟರ ಅಭ್ಯುದಯ, ವೈಭವ, ಸತ್ವಸಾರ, ತಿಲೋತ್ತಮೆ, ಲಕ್ಷ್ಮೀಬಾಯಿ, ಕ್ಷಾತ್ರತೇಜ, ಕುಮುದಿನಿ, ಚಿದಂಬರ ಚರಿತ್ರ, ಶುಕಸಂಜೀವಿನಿ, ಕುಟುಂಬ, ರಾಣೀ-ಮೃಣಾಲಿನಿ ಇವೆಲ್ಲ ಪುಸ್ತಕಗಳು ಅಚ್ಚಿನಲ್ಲಿವೆ.

ಪತ್ತೆ:—ಮ್ಯಾನೇಜರ, "ಸದ್ಗುರು ಸುರಸ ಗ್ರಂಥಮಾಲಾ"
ಆಫೀಸ್ ಹಾವೇರಿ, ಪೋ ಹಾವೇರಿ. ಜಿ ಧಾರವಾಡ.